# ಓದುಗರ ಓಲೆ

ಮಾನ್ಯರೆ;

ತಮ್ಮ ನವಂಬರ್ 84ರ ಪತ್ರಿಕೆ ತಡವಾಗಿ ದೊರೆಯಿತು. ಶ್ರೀ ಕ್ಷೇತ್ರ ಧರ್ಮಸ್ಥಳದ ಬಗ್ಗೆ ಬರೆದ ಲೇಖನ ತುಂಬ ಮೆಚ್ಚಿಗೆಯಾಯಿತು. ಇಂದಿನ ಯುಗದಲ್ಲಿ ಶ್ರೀಕ್ಷೇತ್ರವಾದ ಧರ್ಮಸ್ಥಳವು ಬೃಹತ್ ಆಧ್ಯಾತ್ಮಿಕ ಕೇಂದ್ರವಾಗಿದೆಯೆಂದು ಶ್ರೀ ತಂತ್ರಿಯವರು ವರ್ಣಿಸಿರುವುದು ಬಹುಸತ್ಯ. ಇದೆಲ್ಲ ಶ್ರೀ ಧರ್ಮಣ್ಣ ಹೆಗ್ಗಡೆ ಹಾಗೂ ಅವರ ವಂಶಜರ ತಪಸ್ಸಿನ ಫಲ.

ಪಾಂಡುರಂಗ ಕರಂಡೆ
ಕಾರಜೋಳ.

ಸ್ವಾಮಿ

ಶ್ರೀಸ್ವಾಮಿಯ ಸನ್ನಿಧಿಯಿಂದ ಹೊರಡುತ್ತಿರುವ ಸಪ್ತಗಿರಿ ಮಾಸ ಪತ್ರಿಕೆ ನಿಜಕ್ಕೂ ಧಾರ್ಮಿಕ, ಧರ್ಮಗ್ರಂಥಗಳ ವಿಚಾರಬರಹಗಳ ಸಮಗ್ರ ಸಂಚಯ. ನವಂಬರ್ ಸಂಚಿಕೆಯಲ್ಲಿ ಮೂಡಿಬಂದ 'ಕಾಟುಕುಕ್ಕೆ ಸುಬ್ರಾಯದೇವರು' ಪರಿಚಯಾತ್ಮಕ ಬರಹ ಸಕಾಲಿಕ. ಸಪ್ತಗಿರಿ ಸಂಚಿಕೆ ಭಾರೀ ವಿಳಂಬವಾಗಿ ವಾಚಕರ ಕೈಸೇರುತ್ತಿದೆ. ಇತರ ಪತ್ರಿಕೆಗಳಂತೆ ಆಯಾ ತಿಂಗಳ ಮೊದಲವಾರದಲ್ಲಿ ವಾಚಕರಿಗೆ ತಲುಪುವಂತೆ ಕ್ರಮ ಕೈಗೊಳ್ಳಬೇಕಾಗಿ ವಿನಂತಿ.

ಎಸ್. ಟಿ.
ಹೊನ್ನಾವರ.

ಸಂಪಾದಕರಲ್ಲಿ;

ಈ ನಡುವೆ ಸಪ್ತಗಿರಿ ಕಾಲಕ್ಕೆ ಸರಿಯಾಗಿ ಬರುವುದಿಲ್ಲ. ಆದ ಕಾರಣ ಸರಿಯಾಗಿ ಮುಟ್ಟುವ ಹಾಗೆ ಮಾಡಿರಿ.

ವೆಂ. ರಾ. ಜೋಶಿ
ಮರೋಳ, ಹುನಗುಂದ.

ಮಾನ್ಯರೆ;

ಗೀತಾಜಯಂತಿ ಆದ ಮೇಲೆ ಸಪ್ತಗಿರಿ ಬಂದು ತಲುಪಿತು. ಭಗವದ್ಗೀತೆಯ ಬಗ್ಗೆ ನಾಲ್ಕು ವಿಶೇಷ ಲೇಖನಗಳನ್ನು ಸೇರಿಸಿ ಪುಸ್ತಕದ ಮೌಲ್ಯವನ್ನು ಹೆಚ್ಚಿಸಿದ್ದೀರಿ. ಸಂತೋಷ. ಸಕಾಲಿಕವಾಗಿ ತಲುಪಿದ್ದಲ್ಲಿ ಸೂಕ್ತವಾಗಿರುತ್ತಿತ್ತು.

ನಾರಾಯಣಪಂಡಿತ್
ಬಿಜಾಪುರ.

ಮಾನ್ಯರೆ;

ಇಂದಿರಾಗಾಂಧಿಯವರ ಮುಖಚಿತ್ರದ ನವಂಬರ್ ಸಂಚಿಕೆ ಚೆನ್ನಾಗಿದೆ. ಆಕೆಗೆ ಇದ್ದ ಅನೇಕ ರಾಜಕಾರ್ಯಗಳಲ್ಲಿ ಬಿಡುವು ಮಾಡಿಕೊಂಡು ಹಲವಾರು ಬಾರಿ ಶ್ರೀ ವೇಂಕಟೇಶ್ವರಸ್ವಾಮಿ ದರ್ಶನಕ್ಕೆ ಬಂದಿದ್ದರೆಂಬುದನ್ನು ನೆನೆದರೆ ಧರ್ಮದ ಹಿರಿಮೆಯು ಬಗ್ಗೆ ಅರಿವಾಗುತ್ತದೆ. ಒಳಪುಟಗಳ ಚಿತ್ರಗಳನ್ನು ಸಮಯೋಚಿತವಾಗಿ ಪ್ರಕಟಿಸಿ, ಇತರ ಯಾವ ಪತ್ರಿಕೆಗಳವರೂ ನೀಡದ ಆಕೆಯ ಒಂದು ಮುಖವನ್ನು ಸಪ್ತಗಿರಿ ಪ್ರಕಟಿಸಿದೆ ವಂದನೆಗಳು.

ಕೆ. ಎಸ್. ಅನ್ನಪೂರ್ಣಮ್ಮ
ಶಿಡ್ಲಘಟ್ಟ.

(ಸಪ್ತಗಿರಿ ಮಾಸಪತ್ರಿಕೆ ಹಲವಾರು ತಾಂತ್ರಿಕ ತೊಂದರೆಗಳಿಂದಾಗಿ ತುಸು ತಡವಾಗಿ ಬರುತ್ತಿದೆ. ಮಾರ್ಚ್ ತಿಂಗಳ ಪತ್ರಿಕೆಯಿಂದ ಸರಿಯಾಗಿ ಬರುವುದೆಂದು ತಿಳಿಸುತ್ತ ಹಿಂದಾದ ನಿದಾನವನ್ನು ಓದುಗರು, ಏಜಂಟರು ಸಹೃದಯತೆಯಿಂದ ಸ್ವೀಕರಿಸಬೇಕೆಂದು ಪ್ರಾರ್ಥಿಸಲಾಗಿದೆ—ಸಂ॥)




ಗೌರವ ಸಂಪಾದಕರು:

ಎಸ್. ಲಕ್ಷ್ಮಿನಾರಾಯಣ ಐ.ಎ.ಎಸ್.,

ಸಂಪಾದಕ:

ಕೆ.[?] ಸುಬ್ಬಾರಾವು, ಎಂ.ಎ.,

ಉಪಸಂಪಾದಕ:

ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ:

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





ಸಂಪುಟ ೧೫]  ಫೆಬ್ರವರಿ ೧೯೮೫  [ಸಂಚಿಕೆ ೯


# ವಿಷಯಸೂಚಿ



ಮುಖಪುಟ: ನಟರಾಜ – ಚಿತ್ರ: ಮ. ಶ್ರೀ. ಹಿಂಬದಿಯಲ್ಲಿ ನಾಗಲಾಪುರಂ ದೇವಾಲಯ.

ಒಳಗಡೆ ಪುಟಗಳಲ್ಲಿ: 1. ತಿರುಮಲೆಯಲ್ಲಿ ಪ್ಲವೋತ್ಸವ. 2. ಶ್ರೀ ಕೋದಂಡರಾಮಸ್ವಾಮಿ ರಥೋತ್ಸವ.

# ಸಂಪಾದಕೀಯ

ವಿಶ್ವಜೀವನ ವಿಧಾನಗಳನ್ನು ಪರಿಶೀಲಿಸಿದ ವಿಜ್ಞರು ಪರಮಾತ್ಮ ಒಬ್ಬನೇ ಎಂದೂ. ಸೃಷ್ಟಿ ಸ್ಥಿತಿ ಲಯಾತ್ಮಕವಾದ ವಿಶ್ವ ವ್ಯಾಪಾರವನ್ನು ಕ್ರಮಪದ್ಧತಿಯಲ್ಲಿ ನಿರ್ವಹಿಸಲು ಅವಸ್ಥಾಭೇದಗಳನ್ನನುಸರಿಸಿ ಆತ ವಿವಿಧಾಕೃತಿಗಳನ್ನು ಹೊಂದುವನೆಂದೂ ವಿವರಿಸಿದರು. ತ್ರಿಗುಣಾತ್ಮಕವಾದ ಜೀವರು ತಮ್ಮ ಅಭಿರುಚಿಗಳಂತೆ ಇಷ್ಟದೈವಗಳನ್ನು ಏರ್ಪಡಿಸಿಕೊಂಡು ಆರಾಧಿಸಿದರೂ, ಎಲ್ಲ ಆಕೃತಿಗಳ ಗುಣ ವಿಶೇಷಗಳೂ ಆ ಮೂಲತತ್ತ್ವವನ್ನು ಹೊಂದಿಕೊಂಡೇ ಇರುವುದೆಂದೂ ಬೇರೆ ಬೇರೆ ವಿಧದಲ್ಲಿ ವಿವರಿಸಿದರು. ಎಂತಲೇ ಎಲ್ಲ ದೇವತೆಗಳೂ ಸೃಷ್ಟಿ ಸ್ಥಿತಿಲಯ ಕಾರಕರೂ, ತ್ರಿನೇತ್ರರೂ ಆದರು. ಅಗತ್ಯಕ್ಕೆ ತಕ್ಕಂತೆ ಒಂದೆರಡು ವಿಶೇಷಣಗಳನ್ನು ಒಂದೆರಡು ದೈವಗಳಿಗೆ ಜೋಡಿಸಲಾಗಿದೆಯಾದರೂ ಸ್ಥೂಲಧರ್ಮಗಳೆಲ್ಲ ಒಂದೇ.

ವೇದಗಳು ವಿರಾಟ್ಪುರುಷನ ನಿಃಶ್ವಾಸಗಳೆಂದೂ, ಆ ವಿರಾಟ್ಪುರುಷನೇ ಆದಿನಾರಾಯಣನೆಂದೂ, ಆದಿಮ ಸಾಹಿತ್ಯ ಮೊದಲಿನಿಂದ ಹೇಳುತ್ತಲೇ ಬಂದಿದೆ. ವಿಧಾತ್ರ ಮುಖೋದ್ಗತವೆಂದು ಪುರಾಣ ವಾಙ್ಮಯ ಪ್ರವಚನ. ಇವು ಹೀಗಿರುವಾಗ ತಂತ್ರಶಾಸ್ತ್ರದಂತೆ, ಈ ನಾಲ್ಕು ವೇದಗಳೂ ಸದ್ಯೋಜಾತ, ತತ್ಪುರುಷ, ವಾಮದೇವ, ಅಘೋರ ಮುಖೋಜ್ಜಾತಗಳು. ಪರಶಿವನ ವಿವಿಧ ವಿಶೇಷಣಗಳಲ್ಲಿ ಇವೂ ಇವೆ. ವಿವಿಧ ಆಮ್ನಾಯ ದ್ವಾರದೇವತೆಗಳಾಗಿ ಪಾರಮೇಶ್ವರ ಶಕ್ತಿಗಳನ್ನು ಈ ತಂತ್ರಶಾಸ್ತ್ರಗಳು ವಿವರಿಸುತ್ತಿವೆ. ಇದು ಶಿವಪರವಾಗಿ ಹೇಳಬಹುದಾದ ಮಾತು. ಇನ್ನು ಎಲ್ಲ ಕಥೆಗಳಂತೆ ಶಿವಕಥೆಗಳೂ ಬರೀ ಸಂಕೇತಗಳಲ್ಲ ಸಂದೇಶಗಳೂ ಹೌದು.

ಶಿವನು ಕಾಲಾಗ್ನಿರುದ್ರ ಮಾತ್ರನೇ ಅಲ್ಲ ಜ್ಞಾನಾಗ್ನಿನೇತ್ರನೂ ಸಹ, ಆತನ ಕಾಮದಹನದ ಕಥೆ ಇಂದ್ರಿಯ ನಿಗ್ರಹವನ್ನು ಸೂಚಿಸುತ್ತಲೇ, ಮನುಷ್ಯರಲ್ಲಿನ ಮೂರನೆಯ ಜ್ಞಾನನೇತ್ರ ತೆರೆದುಕೊಂಡರೆ ಇಂದ್ರಿಯೋನ್ಮಾದವನ್ನು ನಾಶಮಾಡಿ, ಮಾನವ ಶಿವನೂ, ಭವರಹಿತನೂ, ಆಗಬಲ್ಲನೆಂಬುದನ್ನು ಸೂಚಿಸುತ್ತದೆ.

ಕಂಠೇಕಾಲ ತತ್ತ್ವ ವೈಯಕ್ತಿಕವಾಗಿ ಮಾನವನಲ್ಲಿನ ಕಷ್ಟಸಹಿಷ್ಣುತೆಯನ್ನೂ ಸಮಾಜಹಿತಪರ್ಯ್ಯಕತೆಯನ್ನೂ ಪ್ರಬೋಧಿಸುತ್ತದೆ.

ಶಿವತತ್ತ್ವ ಲೌಕಿಕ ನಿರಾಡಂಬರತೆಗೆ, ಅಧ್ಯಾತ್ಮಿಕ ಸುಸಂಪನ್ನತೆಗೆ ನಿದರ್ಶನ. ದಿಗಂಬರ, ವ್ಯಾಘ್ರಚರ್ಮಾಂಬರ, ನಾಗಭೂಷಣ, ಎಂಬ ವರ್ಣನೆಗಳಲ್ಲಿನ ಅರ್ಥ ಇದೇ ಆಗಿರಬೇಕು.

ಶಿವನು ರಸರಾಜ, ಇದರಿಂದಲೇ ತನ್ನ ಲೀಲೆಗಾಗಿ ಅರ್ಧರೂಪವನ್ನು ಬೇರ್ಪಡಿಸಿಕೊಂಡು ಮಾಡಿದ ನಾಟ್ಯ ಜೀವಕಳಾವಿಕಾಸಕ್ಕೆ ಮೊದಲಾಯಿತು. ರಸಮಯ ಜೀವಸೃಷ್ಟಿಗೆ ಪಾರ್ವತೀ ಪರಮೇಶ್ವರರು ಮೂಲ ಸ್ತಂಭಗಳಾದರು.

ಸರ್ವಜೀವಸಮಾದರಣೆ ಶಿವತತ್ತ್ವದಲ್ಲಿ ಪ್ರಮುಖ. ಯಜುರ್ವೇದೀಯ ಶತರುದ್ರೀಯದಲ್ಲಿ ನಮಕ ಚಮಕಗಳೆಂದು ಕಾಣಿಸುವ 'ಆಸೀನೇಭ್ಯಃ, ಶಯಾನೇಭ್ಯಃ', ಇತ್ಯಾದಿ ಮಂತ್ರಗಳಲ್ಲಿ ಗುಪ್ತ ವೇದಾಂತದೊಂದಿಗೆ ಸರ್ವಜೀವರೂಪ ದೈವ ಗೌರವ ಭಾವನೆ, ಎಲ್ಲ ವರ್ಗಗಳಿಂದ ಸುಹಿತಾಕಾಂಕ್ಷೆ ಕಂಡುಬರುತ್ತವೆ.

ಒಂದು ಮಾತಿನಲ್ಲಿ ಹೇಳುವುದಾದರೆ ಸ್ಥೂಲವಾಗಿ ಶಿವತತ್ತ್ವವನ್ನು ಅರ್ಥಮಾಡಿಕೊಂಡಲ್ಲಿ ಇಹದಲ್ಲಿ ಹಿತಜೀವಿಯಾಗಿ ಬದುಕುತ್ತ, ಪರಮಪದ ಸೋಪಾನವನ್ನು ಸುಲಭವಾಗಿ ಏರಲು ಸಾಧನ ಮಾಡಿಕೊಳ್ಳಬಹುದು.

# ಗೀತಾಮಹಾತ್ಮೆ

ಧರೋವಾಚ :

ಭಗವನ್ಪರಮೇಶಾನ
ಭಕ್ತಿರವ್ಯಭಿಚಾರಿಣೀ ।
ಪ್ರಾರಬ್ಧಂ ಭುಜ್ಯಮಾನಸ್ಯ
ಕಥಂ ಭವತಿ ಹೇ ಪ್ರಭೋ 1

ಭೂದೇವಿಯ ಮಾತು: ಭಗವಾನ್, ಹೇ ಪ್ರಭೋ, ಪ್ರಾರಬ್ಧವನ್ನು ಅನುಭವಿಸುತ್ತಿರುವ ಮಾನವನಿಗೆ ಅನನ್ಯ ಭಕ್ತಿ ಹೇಗೆ ಕೈಗೂಡುವುದು?

ವಿಷ್ಣುರುವಾಚ :

ಪ್ರಾರಬ್ಧಂ ಭುಜ್ಯಮಾನೋಪಿ
ಗೀತಾಭ್ಯಾಸ ರತಸ್ಸದಾ ।
ಸ ಮುಕ್ತಸ್ಸ ಸುಖೀ ಲೋಕೇ
ಕರ್ಮಣಾ ನೋಪಲಿಪ್ಯತೇ ॥ 2

ವಿಷ್ಣುವಿನ ಉತ್ತರ : ಪ್ರಾರಬ್ಧವನ್ನು ಅನುಭವಿಸುತ್ತಿದ್ದರೂ ಮನುಷ್ಯ ಸದಾ ಗೀತಾಭ್ಯಾಸದಲ್ಲಿ ನಿರತನಾಗಿದ್ದಲ್ಲಿ ಆತ ಕರ್ಮ ಬಂಧನಗಳಿಗೆ ಒಳಗಾಗದೆ ಮುಕ್ತನಾಗಿ, ಲೋಕದಲ್ಲಿ ಸುಖ ಹೊಂದುವನು.

ಮಹಾ ಪಾಪಾದಿ ಪಾಪಾನಿ
ಗೀತಾಧ್ಯಾನಂ ಕರೋತಿ ಚೇತ್ ।
ಕ್ವಚಿತ್ ಸ್ಪರ್ಶಂ ನ ಕುರ್ವಂತಿ
ನಳಿನೀದಳಮಂಭಸಾ ॥ 3

ಗೀತೆಯನ್ನು ಧ್ಯಾನಿಸುವವನನ್ನು ಮಹಾಪಾಪಗಳೂ ಸಹ ತಾಕಲಾರವು; ಹೇಗೆ ತಾವರೆಯೆಲೆಯನ್ನು ನೀರು ಅಂಟುವುದಿಲ್ಲವೋ ಹಾಗೆ.

ಗೀತಾಯಾಃ ಪುಸ್ತಕಂ ಯತ್ರ
ಯತ್ರ ಪಾಠಃ ಪ್ರವರ್ತತೇ ।
ತತ್ರ ಸರ್ವಾಣಿ ತೀರ್ಥಾನಿ
ಪ್ರಯಾಗಾದೀನಿ ತತ್ರವೈ ॥ 4

ಗೀತಾಪುಸ್ತಕವಿರುವಲ್ಲಿಯೂ ಅದರ ಪಠನ ನಡೆಯುವಲ್ಲಿಯೂ ಪ್ರಯಾಗಾದಿ ಸರ್ವತೀರ್ಥಗಳೂ ಇರುತ್ತವೆ.

ಸರ್ವೇ ದೇವಾಶ್ಚ ಋಷಯೋ
ಯೋಗಿನಃ ಪನ್ನಗಾಶ್ಚಯೇ
ಗೋಪಾಲಾ ಗೋಪಿಕಾ ವಾಪಿ ।
ನಾರದೋದ್ಧವ ಪಾರ್ಷದೈಃ
ಸಹ ಯೋ ಜಾಯತೇ ಶೀಘ್ರಂ
ಯತ್ರ ಗೀತಾ ಪ್ರವರ್ತತೇ ॥ 5

ಗೀತಾಭ್ಯಾಸ ನಡೆಯುವ ಸ್ಥಳದಲ್ಲಿ ಸರ್ವ ದೇವತೆಗಳೂ, ಋಷಿಗಳೂ, ಯೋಗಿಗಳೂ, ನಾಗರೂ, ಗೋಪಗೋಪಿಯರೂ, ನಾರದ ಉದ್ಧವ ಮೊದಲಾದ ಪಾರ್ಷದರೂ ಉಪಸ್ಥಿತರಾಗಿರುತ್ತಾರೆ.

ಯತ್ರ ಗೀತಾ ವಿಚಾರಶ್ಚ
ಪಠನಂ ಪಾಠನಂ ಶ್ರುತಮ್ ।
ತತ್ರಾಹಂ ನಿಶ್ಚಿತಂ ಪೃಥ್ವೀ
ನಿವಸಾಮಿ ಸದೈವ ಹಿ ॥ 6

ಭೂದೇವಿ; ಎಲ್ಲಿ ಗೀತೆಯನ್ನು ಓದುವುದು, ವಿವರಿಸುವುದು ನಡೆಯುವುದೋ ಅಲ್ಲೆಲ್ಲ ನಾನು ಸದಾ ಇರುತ್ತೇನೆ.

ಗೀತಾಶ್ರಯೋಹಂ ತಿಷ್ಠಾಮಿ
ಗೀತಾ ಮೇ ಚೋತ್ತಮಂ ಗೃಹಂ ।
ಗೀತಾಜ್ಞಾನ ಮುಪಾಶ್ರಿತ್ಯ
ತ್ರೀನ್ಲೋಕಾನ್ಪಾಲಯಾಮ್ಯಹಂ ॥ 7

ಗೀತೆಯು ನನಗೆ ಉತ್ತಮವಾದ ಗೃಹ. ನಾನು ಅದರಲ್ಲಿ ಸದಾ ವಾಸವಾಗಿರುವೆನು. ಗೀತೆಯ ಜ್ಞಾನವನ್ನು ಆಶ್ರಯಿಸಿಯೇ ಮೂರು ಲೋಕಗಳಲ್ಲಿಯೂ ಇರುತ್ತೇನೆ.

ಗೀತಾ ಮೇ ಪರಮಾ ವಿದ್ಯಾ
ಬ್ರಹ್ಮ ರೂಪಾ ನ ಸಂಶಯಃ ।
ಅರ್ಧ ಮಾತ್ರಾಕ್ಷರಾ ನಿತ್ಯಾ
ಸ್ವ ನಿರ್ವಾಚ್ಯ ಪದಾತ್ಮಿಕಾ ॥ 8

ಗೀತೆಯು ಸರ್ವೋತ್ಕೃಷ್ಟವಾದ ಪರಬ್ರಹ್ಮ ವಿದ್ಯೆ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ. ನಿತ್ಯವೂ, ಸ್ವಾನುಭವೈಕವೇದ್ಯವೂ ಆದ ಪ್ರಣವದ ಅರ್ಧಮಾತ್ರೆಯಲ್ಲಿನ ಭಗವತ್ಸ್ವರೂಪವನ್ನು ತಿಳಿಸುವುದು.

ಚಿದಾನಂದೇನ ಕೃಷ್ಣೇನ
ಪ್ರೋಕ್ತಾ ಸ್ವಮುಖತೋಽರ್ಜುನಮ್ ।
ವೇದತ್ರಯಾ ಪರಾನಂದಾ
ತತ್ತ್ವಾರ್ಥ ಜ್ಞಾನಮಂಜಸಾ ॥ 9

ಈ ಗೀತೆಯನ್ನು ಸಚ್ಚಿದಾನಂದ ಸ್ವರೂಪನಾದ ಶ್ರೀಕೃಷ್ಣನು ತಾನೇ ಅರ್ಜುನನಿಗೆ ಉಪದೇಶಿಸಿದನು. ಇದು ಮೂರು ವೇದಗಳ ಸಾರ. ಪರಮಾನಂದ ಸ್ವರೂಪವಾದದ್ದು. ತನ್ನನ್ನು ಆಶ್ರಯಿಸಿದವರಿಗೆ ಬೇಗನೆ ತತ್ತ್ವಜ್ಞಾನವನ್ನು ನೀಡುತ್ತದೆ.

ಯೋಽಷ್ಟಾದಶ ಜಪೇನ್ನಿತ್ಯಂ
ನರೋ ನಿಶ್ಚಲ ಮಾನಸಃ ।
ಜ್ಞಾನ ಸಿದ್ಧಿಂ ಸ ಲಭತೇ
ತತೋಯಾತಿ ಪರಂ ಪದಮ್ ॥ 10

ಯಾವ ಮನುಷ್ಯನು ಹದಿನೆಂಟು ಅಧ್ಯಾಯಗಳನ್ನೂ ಏಕಾಗ್ರ ಮನದಿಂದ ಪಾರಾಯಣ



ಮಾಡುವನೋ ಆತ ಜ್ಞಾನಸಿದ್ಧಿಯನ್ನು ಹೊಂದಿ ಪರಮ ಪದವನ್ನು ಹೊಂದುವನು.

ಷಾಡಶೋಽಥಃ ಸಂಪೂರ್ಣೋ
ವಾಸುದೇವ ಪಾತಕರಾಜರೀತ್ ।
ತಥಾ ಗೋದಾನಜಂ ಪುಣ್ಯಂ
ಲಭತೇ ನಾತ್ರ ಸಂಶಯಃ ॥ 11

ಹದಿನೆಂಟು ಅಧ್ಯಾಯಗಳನ್ನು ಪಾರಾಯಣ ಮಾಡಲು ಆಗದವರು ಒಂಬತ್ತು ಅಧ್ಯಾಯ ಗಳನ್ನು ಪಾರಾಯಣ ಮಾಡಿದರೂ ಸಾಕು, ಅದ ರಿಂದ ಗೋದಾನ ಮಾಡಿದಷ್ಟು ಪುಣ್ಯಫಲ ದೊರೆಯುತ್ತದೆ. ಇದರಲ್ಲಿ ಸಂಶಯವಿಲ್ಲ.

ತ್ರಿಭಾಗಂ ಪಠಮಾನಸ್ತು
ಗಂಗಾಸ್ನಾನ ಫಲಂ ಲಭೇತ್ ।
ಷಡಂಶಂ ಜಪಮಾನಸ್ತು
ಸೋಮಯಾಗ ಫಲಂ ಲಭೇತ್ ॥ 12

ಆರು ಅಧ್ಯಾಯಗಳನ್ನು ಪಠಿಸುವವರಿಗೆ ಗಂಗಾ ಸ್ನಾನ ಫಲವೂ, ಮೂರು ಅಧ್ಯಾಯ ಓದುವವರಿಗೆ ಸೋಮಯಾಗ ಫಲವೂ ದೊರೆಯುತ್ತದೆ.

ಏಕಾಧ್ಯಾಯಂ ತು ಯೋ ನಿತ್ಯಂ
ಪಠತೇ ಭಕ್ತಿ ಸಂಯುತಃ ।
ರುದ್ರಲೋಕಮವಾಪ್ನೋತಿ
ಗಣೋ ಭೂತ್ವಾ ವಸೇಚ್ಚಿರಮ್ ॥ 13

ಪ್ರತಿ ದಿನವೂ ಒಂದು ಅಧ್ಯಾಯವನ್ನು ಭಕ್ತಿ ಯಿಂದ ಪಾರಾಯಣ ಮಾಡಿದರೂ ರುದ್ರಲೋಕ ವನ್ನು ತಲುಪಿ ಪ್ರಮಥ ಗಣದಲ್ಲಿ ಒಬ್ಬನಾಗಿ ಸೇರಿ ಚಿರಕಾಲ ಸುಖ ಹೊಂದುವನು.

ಅಧ್ಯಾಯ ಶ್ಲೋಕ ಪಾದಂ ವಾ
ನಿತ್ಯಂ ಯಃ ಪಠತೇ ನರಃ ।
ಸ ಯಾತಿ ನರಕಂ ಯಾವತ್
ಮನುಕಾಲಂ ವಸುಂಧರೇ ॥ 14

ಒಂದು ಅಧ್ಯಾಯದ ನಾಲ್ಕನೇ ಒಂದು ಭಾಗ ವನ್ನು ನಿತ್ಯವೂ ಪಾರಾಯಣ ಮಾಡುವ ನರನು ಮನ್ವಂತರಗಳ ಕಾಲ ಮಾನವ ಜನ್ಮವನ್ನೇ ಹೊಂದುವನು.

ಗೀತಾಯಾಃ ಶ್ಲೋಕದಶಕಂ
ಸಪ್ತ ಪಂಚ ಚತುಷ್ಟಯಂ ।
ದ್ವೌ ತ್ರೀಣ್ಯೇಕಂ ತದರ್ಧಂ ವಾ
ಶ್ಲೋಕಾನಾಂ ಯಃ ಪಠೇನ್ನರಃ ॥ 15

ಚಂದ್ರಲೋಕ ಮವಾಪ್ನೋತಿ
ವರ್ಷಾಣಾ ಮಯುತಂ ಧ್ರುವಮ್ ।

ಗೀತಾ ಪಾಠ ಸಮಾಯುಕ್ತೋ
ಮೃತೋ ಮಾನುಷತಾಂ ವ್ರಜೇತ್ ॥ 16

ಗೀತೆಯ ಹತ್ತು ಶ್ಲೋಕಗಳನ್ನಾಗಲೀ, ಏಳು, ಐದು, ನಾಲ್ಕು, ಮೂರು, ಎರಡು ಶ್ಲೋಕ ಗಳನ್ನಾಗಲೀ ಕಡೆಗೆ ಒಂದೇ ಶ್ಲೋಕವನ್ನು ಅಥವಾ ಅರ್ಧಶ್ಲೋಕವನ್ನು ನಿತ್ಯವೂ ಪಠಿಸು ವವರು ಚಂದ್ರಲೋಕಕ್ಕೆ ಹೋಗಿ ಅಲ್ಲಿ ಹತ್ತು ಸಾವಿರವರ್ಷ ಸುಖಿಸುತ್ತಾರೆ. ಗೀತಾಪಾರಾಯಣ ಮಾಡುತ್ತ ಮರಣ ಹೊಂದಿದರೆ ದೇವತ್ವವನ್ನು ಹೊಂದುತ್ತಾರೆ.

ಗೀತಾಭ್ಯಾಸಂ ಪುನಃ ಕೃತ್ವಾ
ಲಭತೇ ಮುಕ್ತಿ ಮುತ್ತಮಾಮ್ ।
ಗೀತೇತ್ಯುಚ್ಚಾರ ಸಂಯುಕ್ತೋ
ಮ್ರಿಯಮಾಣೋ ಗತಿಂ ಲಭೇತ್ ॥ 17

ಗೀತಾಭ್ಯಾಸವನ್ನು ಪುನಃ ಪುನಃ ಮಾಡಿದಲ್ಲಿ ಉತ್ತಮವಾದ ಮೋಕ್ಷವು ಲಭಿಸುವುದು. ಗೀತಾ ಶಬ್ದವನ್ನು ಹೇಳುತ್ತ ಮರಣಿಸಿದರೆ ಸದ್ಗತಿ ದೊರೆಯುವುದು.

ಗೀತಾರ್ಥ ಶ್ರವಣಾಸಕ್ತೋ
ಮಹಾ ಪಾಪಯುತೋಽಪಿ ವಾ ।
ವೈಕುಂಠಂ ಸಮವಾಪ್ನೋತಿ
ವಿಷ್ಣುನಾ ಸಹ ಮೋದತೇ ॥ 18

ಗೀತಾರ್ಥವನ್ನು ಕೇಳಲು ಆಸಕ್ತನಾದಲ್ಲಿ ಅತ ಘೋರ ಪಾಪಗಳನ್ನು ಮಾಡಿದ್ದರೂ ವೈಕುಂಠ ವನ್ನು ಸೇರುವನು. ವಿಷ್ಣುಮೂರ್ತಿಯೊಡನೆ ಸುಖವಾಗಿರುವನು.

ಗೀತಾರ್ಥಂ ಧ್ಯಾಯತೇ ನಿತ್ಯಂ
ಕೃತ್ವಾ ಕರ್ಮಾಣಿ ಭೂರಿಶಃ
ಜೀವನ್ಮುಕ್ತಸ್ಸ ವಿಜ್ಞೇಯೋ
ದೇಹಾಂತೇ ಪರಮಂ ಪದಮ್ ॥ 19

ಯಾರು ತನ್ನ ವಿಧ್ಯುಕ್ತ ಕರ್ಮಗಳನ್ನು ನಿರ್ವಹಿಸುತ್ತ ಗೀತಾರ್ಥವನ್ನು ಮನನ ಮಾಡು ವನೋ ಆತ ಜೀವನ್ಮುಕ್ತನಾಗುವನು. ದೇಹ ಪತನವಾದ ಮೇಲೆ ಆತ ಪರಮಪದವನ್ನು ಹೊಂದುವನು.

ಗೀತಾಮಾಶ್ರಿತ್ಯ ಬಹವೋ
ಭೂಭುಜೋ ಜನಕಾದಯಃ ।
ನಿರ್ಧೂತ ಕಲ್ಮಷಾ ಲೋಕೇ
ಗೀತಾ ಯಾತಾಃ ಪರಂ ಪದಮ್ ॥ 20

ನಿಮಿವಂಶದ ಜನಕ ಮೊದಲಾದ ಅನೇಕ ರಾಜರು ಗೀತೆಯನ್ನು ಆಶ್ರಯಿಸಿಯೇ ಇಹದಲ್ಲಿ ಪಾಪವಿಮುಕ್ತರಾಗಿ ಪರದಲ್ಲಿ ಮುಕ್ತಿಯನ್ನು ಹೊಂದಿದರು.

ಗೀತಾಯಾಃ ಪಠನಂ ಕೃತ್ವಾ
ಮಾಹಾತ್ಮ್ಯಂ ನೈವ ಯಃ ಪಠೇತ್
ವೃಥಾ ಪಾಠೋ ಭವೇತ್ತಸ್ಯ
ಶ್ರಮ ಏವ ಹ್ಯುದಾಹೃತಃ ॥ 21

ಗೀತಾ ಪಾರಾಯಣ ಮಾಡಿ ಮಾಹಾತ್ಮೆ ಯನ್ನು ಪಠಿಸದಿದ್ದರೆ ಪಾರಾಯಣವು ವ್ಯರ್ಥ ವಾಗುವುದು. ಶ್ರಮಮಾತ್ರವೇ ಮಿಗುವುದು.

ಏತನ್ಮಾಹಾತ್ಮ್ಯ ಸಂಯುಕ್ತಂ
ಗೀತಾಭ್ಯಾಸಂ ಕರೋತಿ ಯಃ
ಸ ತತ್ಫಲಮವಾಪ್ನೋತಿ
ದುರ್ಲಭಾಂ ಗತಿಮಾಪ್ನುಯಾತ್ ॥ 22

ಮಹಾತ್ಮೆಯಿಂದ ಕೂಡಿದ ಗೀತೆಯ ಪಾರಾಯಣವನ್ನು ಯಾರು ಮಾಡುವರೋ ಅವರು ಕಡೆಗೆ ದುರ್ಲಭವಾದ ಸದ್ಗತಿಯನ್ನು ಹೊಂದುವರು.

ಸೂತ ಉವಾಚ :

ಮಾಹಾತ್ಮ್ಯಮೇತದ್ಗೀತಾಯಾಃ
ಮಯಾ ಪ್ರೋಕ್ತಃ ಸನಾತನಂ ।
ಗೀತಾಂತೇ ಚ ಪಠೇದ್ಯಸ್ತು
ಯದುಕ್ತಂ ತತ್ಫಲಂ ಲಭೇತ್ ॥ 23

ಸೂತ ಹೇಳುತ್ತಾನೆ: ನನ್ನಿಂದ ಹೇಳಲ್ಪಟ್ಟ ಈ ಗೀತಾಮಾಹಾತ್ಮೆಯು ಸನಾತನವಾದದ್ದು. ಗೀತಾಪಾರಾಯಣದ ನಂತರ ಇದನ್ನು ಓದುವವನಿಗೆ ಮೇಲೆ ಹೇಳಿದ ಫಲ ದೊರೆ–ಯುತ್ತದೆ.

ಇತಿ ವರಾಹ ಪುರಾಣಾಂತರ್ಗತಂ
ಶ್ರೀ ಗೀತಾಮಹಾತ್ಮ್ಯಂ ಸಂಪೂರ್ಣಂ

ಇಂತು ವರಾಹ ಪುರಾಣದಲ್ಲಿ ವಿವರಿಸಲ್ಪಟ್ಟಿರುವ ಶ್ರೀ ಗೀತಾಮಹಾತ್ಮೆ ಪೂರ್ತಿಯಾದುದು.

---

**ಸಪ್ತಗಿರಿಯ ಬಗ್ಗೆ ನಿಮ್ಮ ಅಭಿಪ್ರಾಯಗಳಿಗೆ ಸ್ವಾಗತ**

ಭಾರತೀಯ ವೇದಾಂತ ಪ್ರಪಂಚದ ಹಿರಿಯ ಪುರುಷರು, 'ತತ್ತ್ವವಾದ'ದ ಪ್ರತಿಪಾದಕರು, ದ್ವಾತ್ರಿಂಶಲ್ಲಕ್ಷಣೈರ್ಯುತರು, ಗರ್ಭದಿಂದ ಜ್ಞಾನ ಜಾತರು, ಅಸಂಶಯರು, ಪ್ರಸಾದ ಮಾತ್ರದಿಂದಲೇ ಭಕ್ತರ ಸಂಶಯಗಳನ್ನು ಪರಿಹರಿಸುವವರು ಎಂದು ವಿಖ್ಯಾತರಾದ ಆಚಾರ್ಯ ಮಧ್ವರು "ವಾಯೋ ರಾಮ ವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುಃ ಮಧ್ವೋ ಯತ್ತು ತೃತೀಯಂ" ಎಂಬುದಾಗಿ ವಾಯುದೇವರ ತೃತೀಯವಾದ ಮಧ್ವಾವತಾರವೇ ತಮ್ಮದು ಎಂದು ಭಕ್ತರ ಉದ್ಧಾರಕ್ಕಾಗಿ ಪ್ರಕಟಪಡಿಸಿದ್ದಾರೆ. ಅಂತಹ ಮಹಿಮೋಪೇತರಾದ ಶ್ರೀ ಮಧ್ವಾಚಾರ್ಯರ ಮೂಲ ಮತ್ತು ಅವತಾರ ರೂಪಗಳ ವೈಶಿಷ್ಟ್ಯದ ವಿವೇಚನೆಯೇ ಪ್ರಸ್ತುತ ಲೇಖನದ ಉದ್ದೇಶ.

## ವಾಯುದೇವರ ವೈಶಿಷ್ಟ್ಯ

ವಾಯುದೇವರು ವೇದ ಪ್ರತಿಪಾದ್ಯರು ಎಂಬುದೇ ಅವರ ಉನ್ನತ ವ್ಯಕ್ತಿತ್ವವನ್ನು ಸೂಚಿಸಲು ಸಾಕು. ಬಳಿತ್ಥಾ ಸೂಕ್ತವು ಇವರ ಮಹಿಮಾತಿಶಯಗಳನ್ನು ಕೊಂಡಾಡುತ್ತದೆ. ಈ ಸೂಕ್ತದಲ್ಲಿ ಉಕ್ತವಾದ 'ಪೃಕ್ಷೋ ವಪುಃ', 'ದಶಪ್ರಮತಿಂ', 'ಮಧ್ವ', 'ಮಾತರಿಶ್ವಾ', ಮುಂತಾದುವುಗಳು ವಾಯುದೇವರ ಅವತಾರ ರೂಪಗಳನ್ನು ಬಣ್ಣಿಸುತ್ತಿವೆ. ಅಂತೆಯೇ ತ್ರಿವಿಕ್ರಮ ಪಂಡಿತರು "ಮಧ್ವಾಖ್ಯಂ ಮಂತ್ರಸಿದ್ಧಂ" ಎಂತಲೂ, ಸುಮಧ್ವವಿಜಯಕಾರರು "ತಾಂ ಮಂತ್ರವರ್ಣೈರನುವರ್ಣನೀಯಾಂ" ಎಂತಲೂ ಉದ್ಗಾರ ತೆಗೆದಿರುವುದು. ವಾದಿರಾಜ ಪೂಜ್ಯಚರಣರು "ಯೋ ಮಧ್ವೋ ಮಾತರಿಶ್ವೇತಿ ವಿಸ್ಪಷ್ಟಂ ಶ್ರೂಯತೇ ಶ್ರುತೌ" ಅಂದರೆ ಬಳಿತ್ಥಾ ಸೂಕ್ತದಲ್ಲಿ ಯಾರು ಮಧ್ವನೋ ಅವನು ಮಾತರಿಶ್ವಾ ಎಂದು ಸ್ಪಷ್ಟವಾಗಿ ಶ್ರುತವಾಗಿದೆ ಎಂದು ವರ್ಣಿಸಿದರೆ, ಜಗನ್ನಾಥದಾಸರು "ಸತ್ಯಲೋಕಾಧಿಪ! ಬಳಿತ್ಥಾದಿ ಶ್ರುತಿವಿನುತ! ವೃತ್ತ್ಯಂ ಜಯಾದಿ ಸುರಪೂಜ್ಯ" ಎಂದು ಹಾಡಿ ಹೊಗಳಿದ್ದಾರೆ.

ವಾಯುದೇವರು ಸಕಲ ಚೇತನರ ಅಂತರ್ಯಾಮಿಯಾಗಿದ್ದು ಸಕಲ ಕೆಲಸಗಳನ್ನು ಮಾಡಿಸುವವರು. ಆದುದರಿಂದಲೇ ಅವರ ಗುಣಗಾನ ಮಾಡುವಾಗ "ಉಚ್ಚಾವಚಾಃ ಏನ ಸಮಸ್ತ ಚೇಷ್ಟಾಃ" ಎಂದು ಗೌರವಿಸಿರುವುದು. ಮಹಾಭಾರತದಲ್ಲಿ "ವಾಯುರ್ಭೀಮೋ ಭೀಮನಾದೋ ಮಹೌಜಾ ಸರ್ವೇಷಾಂ ಚ ಪ್ರಾಣಿನಾಂ ಪ್ರಾಣಭೂತಃ ಅನಾವೃತ್ತಿರ್ದೇಹಿನಾಂ ದೇಹಪಾತೇ ತಸ್ಮಾತ್ ವಾಯುರ್ದೇವದೇವೋ ವಿಶಿಷ್ಟಃ" ಎಂದು ವಾಯುದೇವರಿಗೆ ದೇವತೆಗಳಲ್ಲಿ ವಿಶಿಷ್ಟವಾದ ಸ್ಥಾನವನ್ನು ಕೊಡಲಾಗಿದೆ. ಈ ಮಹಿಮೆಯನ್ನೇ ಶ್ರೀಪಾದರಾಜರು "ಕರಣಾಭಿಮಾನಿಗಳು ಸುರರು ದೇಹವ ಬಿಡಲು ಕುರುಡ ಕಿವುಡ ಮೂಕನೆಂದೆನಿಸುವ! ಪರಮ ಮುಖ್ಯಪ್ರಾಣ ತೊಲಗಲಾ ದೇಹವನ್ನು ಅಂದು ಹೆಣನೆಂದು ಪೇಳ್ವರು ಬುಧ ಜನ॥" ಎಂಬುದಾಗಿ ಕನ್ನಡಿಸಿದ್ದಾರೆ.

ಇಷ್ಟೇ ಅಲ್ಲದೆ, ಭೂಮಂಡಲವನ್ನು ಶಿರದಲ್ಲಿ ಧರಿಸುವ ಕಾರ್ಯದಲ್ಲಿ ಶೇಷದೇವರಿಗೆ ಕೂರ್ಮರೂಪದಿಂದ ಸಹಾಯಕರಾಗಿರುವುದು, (ಸ ಏಷ ಕೂರ್ಮರೂಪೇಣ ವಾಯುರಂಡೋದರೇ ಸ್ಥಿತಃ! ವಾಯೋಃ ಪುಚ್ಛಂ ಸಮಾಶ್ರಿತ್ಯ ಶೇಷಸ್ತು ಪೃಥಿವೀಮಿಮಾಂ) ಪರಬ್ರಹ್ಮನಾದ ಶ್ರೀಹರಿಗೆ ಮುಖ್ಯ ಪ್ರತಿಮಾ ರೂಪರಾಗಿರುವುದು, (ನಮಸ್ತೇ ವಾಯೋ ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ) ಆ ಪರಮಾತ್ಮನ ಅವಿಚ್ಛಿನ್ನ ಭಕ್ತರಾಗಿದ್ದು, ಆತನಿಗೆ ವಾಹನರಾಗಿರುವುದು ([illegible] ವಾಯು ವಾಹನಃ! ಸುಪರ್ಣೋ ವಾಯು ವಾಹನಃ) ವಾಯುದೇವರ ಹಿರಿಮೆಗಳಲ್ಲಿ ಕೆಲವು!

ಜ್ಞಾನ-ಬಲಗಳನ್ನು ಪೂರ್ಣ ಪ್ರಮಾಣದಲ್ಲಿ ಹೊಂದಿದ ವಾಯುದೇವರು (ಯಸ್ಮಾದಯಿ ಜ್ಞಾನ ವಾಚಿ ಪರಮೋ ಬಲವಾಚಕಃ) ಪರಮಾತ್ಮನ ಪೂರ್ಣಾನುಗ್ರಹಕ್ಕೆ ಪಾತ್ರರಾದುದರಿಂದ (ವಾಯೋರ್ವಿರುದ್ಧಂ ನ ಕರೋತಿ ವಿಷ್ಣುಃ) ಮೋಕ್ಷದಾತೃತ್ವ ಸಾಮರ್ಥ್ಯವನ್ನು ಹೊಂದಿದ್ದಾರೆ (ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯ) ಆದುದರಿಂದಲೇ ದಾಸರಾಯರುಗಳು "ನೀರ ಜಳಮಳ ತೊಳಿಸಿ ಅರಲಿಟ್ಟವರಲ್ಲ! ನೀರಿಂದಿ ಹೆಪ್ಪಿಡಲು ಹೆಪ್ಪುದೇನೊ! ಮಾರುತಿಯೆ ನಿನ್ನ ಕೃಪೆ ಪಡೆಯದಲೆ! ಅನ್ಯರ ಕಾರುಣ್ಯ ಮೋಕ್ಷ ಸಾಧನವಲ್ಲ!" ಎಂದರು. ಈ ವಾಯುದೇವರ ಮಹಾತ್ಮ್ಯವನ್ನು ಕೇವಲ ಶ್ರವಣ ಮಾಡುವುದರಿಂದಲೇ ಮೋಕ್ಷಪ್ರಾಪ್ತಿಯಾಗುವುದು ನಿಶ್ಚಿತ. (ನಿರ್ಣಯ ಶ್ರವಣಾದೇವ ಮೋಕ್ಷಂ ಯಾಂತಿ ನ ಸಂಶಯಃ)

## ಹನುಮಂತದೇವರ ಮಹಿಮೆ

"ದಾಸೋಹಂ ಕೋಸಲೇಂದ್ರಸ್ಯ" ಎಂಬುದಾಗಿ ಪರಮಾತ್ಮನನ್ನು ದಾಸ್ಯಭಾವದಿಂದ ಸೇವಿಸಿದ ಮಹಾಭಕ್ತ ಶಿರೋಮಣಿ ಹನುಮಂತ. ಪ್ರಪಂಚದಲ್ಲಿ ಯಾವಯಾವ ಗುಣಗಳು ಪ್ರಸಿದ್ಧವಾಗಿರುವವೋ ಆಯಾಗುಣಗಳಿಗೆ ಹನುಮಂತದೇವರನ್ನು ದೃಷ್ಟಾಂತವಾಗಿ ತೋರಿಸುತ್ತಿದ್ದರಂತೆ! (ಯೇಯೇ ಗುಣಾ ನಾಮ ಜಗತ್ಪ್ರಸಿದ್ಧಾಂ ಯಂ ತೇಷು ತೇಷು ಸ್ಮ ನಿದರ್ಶಯಂತಿ! ಸಾಕ್ಷಾನ್ಮಹಾಭಾಗವತ ಪ್ರಬರ್ಹಂ ಶ್ರೀಮಂತಮೇನಂ ಹನುಮಂತಮಾಹುಃ॥) ಅಲ್ಲದೆ, ಅವರು ಪರಮ ಭಗವದ್ಭಕ್ತರಾದುದರಿಂದ ಅವರ ಬಾಲಲೀಲೆಗಳು ದೇವತೆಗಳ ಸಭೆಗಳಲ್ಲಿ ಹೊಗಳಲ್ಪಡುತ್ತಿದ್ದವಂತೆ!! (ಕರ್ಮಾಣಿ ಕರ್ಣ್ಯಾನ್ ಪರಮಾದ್ಭುತಾನಿ! ಸಭಾಸು ದ್ಯುವೀಷು ಸಭಾಜಿತಾನಿ!) ಹನುಮಂತದೇವರ ಪರಾಕ್ರಮವನ್ನು ಕುರಿತು ಹೇಳುವಾಗ ರಾಮಚಂದ್ರದೇವರು "ಕೃತಂ ಹನುಮತಾ ಸುಮಹದ್ಭುವಿ ದುಷ್ಕರಂ! ಮನಸಾಪಿ ಯದನ್ಯೇನ ನ ಶಕ್ಯಂ ಧರಣೀತಲೆ" ಅಂದರೆ ಭೂಮಂಡಲದಲ್ಲಿ ಅನ್ಯರಿಂದ ಆಲೋಚಿಸಲೂ ಆಗದ ಕಾರ್ಯವನ್ನು ಹನುಮಂತನು ಮಾಡುತ್ತಾನೆ ಎಂದು ವಿಶ್ವಾಸದಿಂದ ನುಡಿಯುತ್ತಾರೆ.

ಹನುಮಂತದೇವರು ಪರಾಕ್ರಮಿಗಳು ಮಾತ್ರವಾಗಿರದೆ ಪ್ರಾಜ್ಞರೂ, ಸಕಲವೇದ ಪಾರಂಗತರೂ, ವ್ಯಾಕರಣ ವಿಶಾರದರೂ, ಬಹುಶ್ರುತರೂ, ವಾಕ್ಪಟುಗಳೂ ಆಗಿದ್ದರೆಂಬುದನ್ನು ರಾಮಚಂದ್ರದೇವರೇ ಹೇಳುತ್ತಾರೆ, (ನಾನೃಗ್ವೇದಿನಃ ತಸ್ಯ ನಾಯಜುರ್ವೇದ ಧಾರಿಣಃ! ನಾ ಸಾಮವೇದ ವಿದುಷಃ ಶಕ್ಯಮೇವಂ ಪ್ರಭಾಷಿತುಮ್॥ ನೂನಂ ವ್ಯಾಕರಣಂ ಕೃತ್ಸ್ನಂ ಮನೇನ ಬಹುಧಾ ಶ್ರುತಮ್! ಬಹುವ್ಯಾಹರತಾನೇನ ನ ಕಿಂಚಿದಪಶಬ್ದಿತಮ್॥) ಇಷ್ಟೇ ಅಲ್ಲದೆ, "ತೇಜೋ ಧೃತಿರ್ಯಶೋ ದಾಕ್ಷ್ಯಂ ಸಾಮರ್ಥ್ಯಂ ವಿನಯೋನಯಃ ಪೌರುಷಂ ಬುದ್ಧಿರ್ಯಸ್ಮಿನ್ನೇತಾನಿ ನಿತ್ಯದಾ"

**ಶ್ರೀ ಶಟ್ಟಿ ವೆಂಕೋಬರಾವ್**

ಎಂದು ಆ ಪ್ರಭು ಶ್ರೀರಾಮಚಂದ್ರನಿಂದಲೇ ಗೌರವಿಸಲ್ಪಟ್ಟವರು. ಇದೆಲ್ಲಕ್ಕೂ ಕಳಸವಿಟ್ಟಂತೆ ಲಕ್ಷ್ಮೀದೇವಿಯರ ಹೊರತು ಅನ್ಯರಿಗೆ ಅಲಭ್ಯವಾದ ಪರಮಾತ್ಮನ ಆಲಿಂಗನ ಸುಖವನ್ನು ಪಡೆದವರು ಹನುಮಂತ ದೇವರು. ಇಂತಹ ಭಕ್ತವರೇಣ್ಯರಾದ ಮುಖ್ಯ ಪ್ರಾಣದೇವರ ಕೃಪಾಕಟಾಕ್ಷದಿಂದ ಮಾತ್ರವೇ ಹರಿಯ ಅನುಗ್ರಹವನ್ನು ಸಂಪಾದಿಸಬಹುದೆಂಬುದನ್ನು ದಾಸರು "ಮಾತರಿಶ್ವಾ ನೀ ಪ್ರೀತನಾಗೆ ಅಜತಾತನು ಒಲಿಯುವ ಸುಲಭದಲಿ" ಎನ್ನುವ ಹಾಡಿನ ಮೂಲಕ ತಿಳಿಸಿದ್ದಾರೆ.

## ಭೀಮಸೇನದೇವರ ಮಹಿಮೆ

ಮುಂದೆ ದ್ವಾಪರಯುಗದಲ್ಲಿ, "ಆ ವಾಯು ಭೀಮನಾಗಿ ಸುರವರ ಬಲದಿಂ ಕೊಬ್ಬಿದಾ ಮಾಗಧನ್ನು। ಕಿರ್ಮೀರಂ ಕೀಚಕನ್ನು ಬಕಮುಖ ಖಳರಂ ದುಷ್ಟದುರ್ಯೋಧನನ್ನು। ಕೊಂದೂ ರಾಜಾಶ್ವಮೇಧಂ ಪ್ರಮುಖ ಮಖಗಳಂ ಮಾಡಿ" ಕೃಷ್ಣಾರ್ಪಣವೆಂದರು. ಭೀಮಸೇನದೇವರ ಪರಾಕ್ರಮವೆಂತಹುದೆಂದರೆ ಅವರು ಮಗುವಾಗಿದ್ದಾಗ ತಾಯಿಯ ತೊಡೆಯ ಮೇಲಿಂದ ಆಕಸ್ಮಾತ್ ಜಾರಿಬಿದ್ದಾಗ ಶತಶೃಂಗ ಪರ್ವತವು ಸೀಳಿಹೋಯಿತಂತೆ! (ಬಿಭೇದ ಭೂಭೃದ್ವಪುರಂಗ ಸಂಗಾಚ್ಛಿತ್ರಂ ಸ ಪತಿತೋ ಜನನೀ ಕರಾಗ್ರಾತ್) ಅವರಿಗೆ ಸಮರ ಶೌರ್ಯದಲ್ಲಾಗಲೀ, ಪಾಂಡಿತ್ಯದಲ್ಲಾಗಲೀ, ಪಟುತ್ವದಲ್ಲಾಗಲೀ ಯಾರೊಬ್ಬರೂ ಕೌರವ ಪಾಂಡವ ಸೇನೆಯಲ್ಲಿರಲಿಲ್ಲ. (ಭೀಮಸೇನ ಸಮೋ ನಾಸ್ತಿ ಸೇನಯೋರುಭಯೋರಪಿ। ಪಾಂಡಿತ್ಯೇ ಚ ಪಟುತ್ವೇ ಚ ಶೂರತ್ವೇ ಚ ಬಲೇಪಿ ಚ ॥) ಅಲ್ಲದೆ ಮಹಾ ಭಾರತದ ಕರ್ತೃಗಳಾದ ಶ್ರೀ ವ್ಯಾಸರೇ "ದ್ವಾವೇವ ಪುರುಷೌ ಲೋಕೇ ವಾಸುದೇವಾನಂತರೌ। ಭೀಮಸ್ತು ಪ್ರಥಮ ಸ್ತತ್ರ ದ್ವಿತೀಯೋ ದ್ರೌಣಿ ರೇವ ಚ" ಎಂದು ಭೀಮಸೇನದೇವರನ್ನು ವರ್ಣಿಸಿದ್ದಾರೆ. ಭೀಮಸೇನ ದೇವರು ಭಕ್ತಿ, ಜ್ಞಾನ, ವೈರಾಗ್ಯ, ಪ್ರಜ್ಞಾ ಮುಂತಾದುವುಗಳನ್ನು ಹೊಂದಿದವರು (ಭಕ್ತಿ ಜ್ಞಾನಂ ಸವೈರಾಗ್ಯಂ ಪ್ರಜ್ಞಾ ಮೇಧಾ ಧೃತಿಃ ಸ್ಥಿತಿಃ। ಯೋಗಃ ಪ್ರಾಣೋ ಬಲಂ ಚೈವ ವೃಕೋದರ ಇತಿ ಸ್ಮೃತಃ।) ವಾಸ್ತವವಾಗಿ ಧೃಷ್ಟದ್ಯುಮ್ನನು ಪಾಂಡವ ಸೇನೆಯ ಸೇನಾಧಿಪತಿಯಾಗಿದ್ದರೂ ಭೀಮಸಂರಕ್ಷಿತ ಪಾಂಡವಸೇನೆಯೆಂಬ ದುರ್ಯೋಧನನ ಮಾತು ಭೀಮಸೇನನ ಅಪ್ರತಿಹತ ಪರಾಕ್ರಮಕ್ಕೆ ಉಜ್ವಲ ನಿದರ್ಶನವಾಗಿದೆ. (ಪರ್ಯಾಪ್ತಂ ತ್ವಿದ ಮೇತೇಷಾಂ ಬಲಂ ಭೀಮಾಭಿರಕ್ಷಿತಮ್).

ದೇವತೆಗಳಲ್ಲಿ ಬಲಿಷ್ಠರಾದಂತೆಲ್ಲ ಹೆಚ್ಚು ಹೆಚ್ಚು ಜ್ಞಾನ ಭಕ್ತಿಗಳು ಇರುತ್ತವಂತೆ. (ದೇವೇಷು ಬಲಿನಾಮೇವ ಭಕ್ತಿಜ್ಞಾನೇ ನ ಚಾನ್ಯಥಾ) ಭೀಮಸೇನದೇವರು ಅತ್ಯಂತ ಬಲಶಾಲಿಗಳಾದುದರಿಂದ ಪರಮಾತ್ಮನಲ್ಲಿ ಉತ್ಕಟವಾದ ಭಕ್ತಿಯನ್ನು ಹೊಂದಿದವರು. ಅವರಿಗೆ ಪರಮಾತ್ಮನಲ್ಲಿ ಎಷ್ಟು ಭಕ್ತಿ ಎಂದರೆ ತಮ್ಮ ಪತ್ನಿಯಾದ ದ್ರೌಪದೀದೇವಿಯರ ವಸ್ತ್ರಾಪಹರಣಮಾಡುವ ಸಂದರ್ಭದಲ್ಲಿ ದುರ್ಯೋಧನಾದಿಗಳನ್ನು ತಕ್ಷಣದಲ್ಲಿಯೇ ಸಂಹರಿಸುವ ಮನಸ್ಸು ಮತ್ತು ಸಾಮರ್ಥ್ಯವಿದ್ದರೂ ಪರಮಾತ್ಮನ ಮನಸ್ಸನ್ನು ಅರಿತು ಸುಮ್ಮನಿದ್ದರಂತೆ. ಆದುದರಿಂದಲೇ ವಾದಿರಾಜರು "ಇದಂತು ಮಹದಾಶ್ಚರ್ಯಂ ಸಭಾಮಧ್ಯೇ ವೃಕೋದರಃ ಸ್ವಭಾರ್ಯಾಯೈ ದ್ರುಹ್ಯತೋಪಿ ಸೇಹೆ ಸ್ನೇಹೇನ ಕೇಶವೇ" ಎಂಬುದಾಗಿ ಆಶ್ಚರ್ಯ ಸೂಚಿಸಿದ್ದಾರೆ. ಇಂಥ ಭಕ್ತ ಶಿರೋಮಣಿಯನ್ನು ಸ್ಮರಿಸದವನು ಮೋಕ್ಷವನ್ನು ಹೇಗೆ ತಾನೆ ಹೊಂದಿಯಾನು? ಅಂತೆಯೇ ವಿಜಯದಾಸರು "ಹರಿ ನಿನ್ನ ಸ್ಮರಿಸಿ ವೃಕೋದರನ ಸ್ಮರಿಸದವ ಹಿರಿಯನಾದರೆ ಏನು ಕಿರಿಯನಾದರೆ ಏನೋ ತರವಲ್ಲ ಮನ್ನಣೆಗೆ ಪರಕೆ ದೂರನು ಕಾಣೋ" ಎಂದು ನುಡಿದಿದ್ದಾರೆ.

## ಮಧ್ವಾಚಾರ್ಯರ ಮಹಿಮೆ

ಮುಂದೆ ಕಲಿಯುಗದಲ್ಲಿ ಭೀಮಸೇನ ದೇವರೇ 'ಮಧ್ವ' ಎಂಬ ಅಭಿದಾನದಿಂದ ಹರಿತತ್ತ್ವವನ್ನು ಪ್ರಸಾರ ಮಾಡುವುದಕ್ಕೋಸ್ಕರ ಅವತರಿಸಿದರು. (ಜಾತಃ ಪುನರ್ವಿಪ್ರತನು ಸ ಭೀಮೋ ದ್ವೈತಂ ನಿಗೂಢಂ ಹರಿತತ್ತ್ವ ಮಾಹ) "ಅರ್ವೆದು ಮೇಲೆರಡು ಅಧಿಕ ಲಕ್ಷಣವುಳ್ಳ" ಅಂಗಸೌಷ್ಟವ, ಅಪಾರವಾದ ವಿದ್ವತ್ತು, ಅಮೋಘವಾದ ವಾಕ್ಪಟುತ್ವ, ಶ್ರೀಹರಿಯಲ್ಲಿ ಉತ್ಕಟವಾದ ಭಕ್ತಿ–ಇವುಗಳಿಂದ ಸಜ್ಜನರ ಮನಸ್ಸನ್ನು ಸೂರೆಗೊಂಡರು.

ಆಚಾರ್ಯ ಮಧ್ವರು ಶ್ರೀಹರಿಯೇ ಸರ್ವೋತ್ತಮನೂ ಮತ್ತು ಸ್ವತಂತ್ರನೂ ಜಗತ್ತು ಸತ್ಯವೂ ಮತ್ತೆ ಅಸ್ವತಂತ್ರವೂ ಎಂದು ಸಾರುವ ತತ್ತ್ವವಾದವನ್ನು ಪ್ರಸಾರಮಾಡಿದರು. (ಸ್ವತಂತ್ರಂ ಅಸ್ವತಂತ್ರಂ ಚ ದ್ವಿವಿಧಂ ತತ್ತ್ವಮಿಷ್ಯತೆ. ಸ್ವತಂತ್ರೋ ಭಗವಾನ್ ವಿಷ್ಣುಃ) ಆಚಾರ್ಯರಿಗೆ ಹರಿಸರ್ವೋತ್ತಮತ್ವದಲ್ಲಿ ಅಚಲವಾದ ನಂಬಿಕೆ. ಎಲ್ಲಾ ಶ್ರುತಿ, ಸ್ಮೃತಿ, ಪುರಾಣಗಳೂ ಹರಿಸರ್ವೋತ್ತಮತ್ವವನ್ನೇ ಸಾರುತ್ತವೆ ಎಂಬುದು ಮಧ್ವರ ಶಾಸ್ತ್ರದ ಸಾರ. (ವಿಷ್ಣೋಃ ಸರ್ವೋತ್ತಮತ್ವೇ ಸರ್ವಾಗಮಾನಾಂ ಮಹಾತಾತ್ಪರ್ಯಂ) ಶ್ರೀಹರಿಯ ಸರ್ವೋತ್ತಮತ್ವವನ್ನು ತಿಳಿಸುತ್ತ "ಶೃಣುತಾಮಲ ಸತ್ಯವಚಃ ಪರಮಂ ಶಪಥೇರಿತಮುಚ್ಛ್ರಿತ ಬಾಹುಯುಗಮ್। ನ ಹರೇಃ ಪರಮೋ ನ ಹರೇಃ ಸದೃಶಃ"–ಹರಿಗೆ ಸಮರೂ ಇಲ್ಲ,ಘನರೂ ಇಲ್ಲ, ಇದು ಸತ್ಯ ಸತ್ಯ ಎಂದು ಎರಡು ತೋಳುಗಳನ್ನೆತ್ತಿ ಶಪಥಮಾಡುತ್ತೇನೆ–ಎಂದು ಭಕ್ತ್ಯುದ್ರೇಕದಿಂದ ಸಾರಿದ್ದಾರೆ. ಅಷ್ಟೇ ಅಲ್ಲ "ರಸೋಯೋಷ್ಟಮಃ" ಎಂಬುದರಿಂದ ಷಡ್ರಸಗಳಲ್ಲಿ ಏಳನೇದೆ ಇಲ್ಲವೆಂದ ಮೇಲೆ ಎಂಟನೆಯ ರಸ ಎಲ್ಲಿರಲು ಸಾಧ್ಯ. ಹಾಗೆಯೇ ಶ್ರೀ ಹರಿಗೆ ಸಮರೇ ಇಲ್ಲವೆಂದ ಮೇಲೆ ಆತನಿಗಿಂತ ಘನರು ಇರಲು ಸಾಧ್ಯವೆ ಎಂದು ಉದ್ಗರಿಸುತ್ತಾರೆ ಆಚಾರ್ಯ ಮಧ್ವರು.

ಮಧ್ವಾಚಾರ್ಯರು, ಸಮಾಜಸೇವೆಗೆ ಕೊಟ್ಟಿರುವ ಉನ್ನತ ಸ್ಥಾನವು ಅವರಿಗೆ ಸಮಾಜದ ಉದ್ಧಾರ ಕಾರ್ಯಗಳಲ್ಲಿ ಇದ್ದ ಕಳಕಳಿಯನ್ನು ಪ್ರತಿಬಿಂಬಿಸುತ್ತದೆ. ಎಲ್ಲಾ ವರ್ಗದ ಜನರಿಗೂ ಕೈಲಾದ ಉಪಚಾರಮಾಡುವುದು ರಾಜರಿಗೆ ಪ್ರಜೆಗಳಾದವರು ಕಪ್ಪಕಾಣಿಕೆಗಳನ್ನು ಒಪ್ಪಿಸುವಷ್ಟೇ ಕಡ್ಡಾಯವಾದುದು ಎಂದು ಆಚಾರ್ಯರು ಕಟ್ಟಳೆ ಮಾಡಿದ್ದಾರೆ (ನಾನಾ ಜನಸ್ಯ ಶುಶ್ರೂಷಾ ಕರ್ಮಾಖ್ಯ ಕರವನ್ಮಿತೇಃ) ಭೂತದಯೆ ಸರ್ವರಿಗೂ ಅವಶ್ಯಕ ಎಂಬುದನ್ನು ಉಪದೇಶಿಸಲು "ತಸ್ಯ ಪ್ರಾಣ್ಯುಪಕಾರೇಣ ಪ್ರೀತೋ ಭವತಿ ಕೇಶವ" ಎಂದಿದ್ದಾರೆ.

ಸದ್ಗುಣಗಳಿಗೆ ಮಧ್ವರು ಕೊಟ್ಟಿರುವ ಪ್ರಾಶಸ್ತ್ಯ ಅವಿಸ್ಮರಣೀಯ ಹಾಗೂ ಅಭೂತಪೂರ್ವವಾದದ್ದು. "ಅಧಿಕಾಶ್ಚೇತ್ ಗುಣಾಃ ಶೂದ್ರೇಬ್ರಾಹ್ಮಣಾದಿ ಸ ಉಚ್ಯತೆ। ಬ್ರಾಹ್ಮಣೋಪ್ಯಲ್ಪ ಗುಣಕಃ ಶೂದ್ರ ಏವೇತಿ ಕೀರ್ತಿತಃ" ಅಂದರೆ ಉತ್ತಮವಾದ ಗುಣಗಳನ್ನು ಹೊಂದಿರುವ ವ್ಯಕ್ತಿಯು ಹುಟ್ಟಿನಿಂದ ಶೂದ್ರನಿದ್ದರೂ ಬ್ರಾಹ್ಮಣ ಎಂದೇ ಕರೆಯಲ್ಪಡುತ್ತಾನೆ. ಅಲ್ಪಗುಣಗಳನ್ನು ಹೊಂದಿರುವ ಬ್ರಾಹ್ಮಣನು ಶೂದ್ರನೆಂದೇ ಕರೆಯಲ್ಪಡುತ್ತಾನೆ ಎಂಬ ಆಚಾರ್ಯರ ಮಾತುಗಳು ಅವರ ಹೃದಯ ವೈಶಾಲ್ಯವನ್ನು ತೋರಿಸುತ್ತವೆ.

ಆಚಾರ್ಯರು ಒಬ್ಬ ಮಹಾನ್ ಸಂಶೋಧಕರು. ದೇಶದ ಉದ್ದಗಲಕ್ಕು ಸಂಚರಿಸಿ ಆಯಾ ಭಾಗಗಳಲ್ಲಿ ದೊರೆಯುವ ಪುರಾತನ ಗ್ರಂಥಗಳನ್ನೆಲ್ಲ ಸಂಗ್ರಹಿಸಿ, ಅವುಗಳಲ್ಲಿ ಕೆಲವೆಡೆಗಳಲ್ಲಿ ಕಾಣಬರುವ ವಿರೋಧಾಭಾಸಗಳನ್ನು ಪರಿಹರಿಸಲು ಶ್ರಮಿಸಿದಾರೆ. "ನ ಚಾನುಭಾವ ವಿರೋಧೇ ಆಗಮಸ್ಯ ಪ್ರಾಮಾಣ್ಯಂ" ಎನ್ನುವ ಅವರ ಮಾತುಗಳಲ್ಲಿ ವೈಜ್ಞಾನಿಕ ಮನೋಗುಣವನ್ನು ಹೊಂದಿದ ಒಬ್ಬ ದಾರ್ಶನಿಕರಾಗಿ ಆಚಾರ್ಯರು ಕಾಣಿಸುತ್ತಾರೆ.

(12ನೇ ಪುಟ ನೋಡಿ)

# ದ್ವೈತ ದರ್ಶನ

ಹರಿ ಸರ್ವೋತ್ತಮನೆಂಬ ಪಕ್ಷವನ್ನು ಈ ದರ್ಶನವು ಸ್ಥಾಪಿಸುತ್ತದೆ. ಶ್ರುತಿ, ಸ್ಮೃತಿ, ಇತಿಹಾಸ ಪುರಾಣಗಳು ವಿಷ್ಣುವಿಗೆ ಸರ್ವೋತ್ತಮತ್ವ ವನ್ನು ಸ್ಥಾಪಿಸಿರುವಂತೆ, ಅಂತಹ ಉತ್ಕೃಷ್ಟ ಜ್ಞಾನವೇ ಮೋಕ್ಷಸಾಧನವೆಂದು ಇಲ್ಲಿ ಸಿದ್ಧಾಂತ ಮಾಡಲಾಗಿದೆ. ಜಗತ್ಕಾರಣತ್ವ – ಇತ್ಯಾದಿ ಸರ್ವಕೃತ್ಯಗಳು ವಿಷ್ಣುವಿಗೇ ಸೇರಿದುವೆಂದು ಸಮರ್ಥನೆಮಾಡಿ, ವಿಷ್ಣುಭಕ್ತಿಯೇ ಜೀವನ ಕರ್ತವ್ಯ ಎಂದು ಇಲ್ಲಿ ನಿರ್ಣಯಮಾಡಿರುವುದರಿಂದ ಈ ದರ್ಶನಕ್ಕೆ ವೈಷ್ಣವಸಿದ್ಧಾಂತ ಎಂಬ ಹೆಸರು ರೂಢಿಯಲ್ಲಿದೆ.

ವಿಷ್ಣು ಸರ್ವೋತ್ತಮವಾದದಲ್ಲಿ ಅವನ ಪಟ್ಟ ಮಹಿಷಿ ಮಹಾಲಕ್ಷ್ಮಿಗೆ ಅನೇಕಾಂಶಗಳಲ್ಲಿ ಸಾಮ್ಯವಿದ್ದರೂ ಕೆಲವು ಅಂಶಗಳಲ್ಲಿ ತಾರತಮ್ಯ ವಿರುವುದು. ಅವಳಿಗಿಂತ ಬ್ರಹ್ಮನು, ಅವನಿಗಿಂತ ವಾಸುದೇವನು, ಅವನಿಗಿಂತ ಸರಸ್ವತಿ, ಅವಳಿಗಿಂತ ವಾಯುದೇವನ ಪತ್ನಿ–ಹೀಗೆ ದೇವತೆಗಳಲ್ಲಿ ಸ್ವರೂಪಾನುಗುಣವಾಗಿ ತಾರತಮ್ಯವಿರುವುದು. ಪಶುಪಕ್ಷಿಯಾದಿಯಾಗಿ ಎಲ್ಲದರಲ್ಲಿಯೂ ಬಾಹ್ಯ ಸ್ವರೂಪದಲ್ಲಿ ಭೇದ ಇರುವಂತೆ ಆತ್ಮ ಸ್ವರೂಪ ದಲ್ಲಿಯೂ ತಾರತಮ್ಯವಿರುವುದು. ಈ ದರ್ಶನದ ಉಪದೇಶವು, ವಾಯುದೇವನಿಂದ ಹನುಮಂತ–ನಿಗೂ, ಅವನಿಂದ ಭೀಮನಿಗೂ ಕೊನೆಯಲ್ಲಿ ಆಚಾರ್ಯ ಆನಂದತೀರ್ಥರಿಗೂ ಪ್ರಾಪ್ತವಾಯಿತೆಂಬ ನಂಬಿಕೆ ಇದೆ. ಆನಂದತೀರ್ಥರಿಗೆ ಅನೇಕ ಹೆಸರು ಗಳು ರೂಢಿಯಲ್ಲಿ ಬಂದಿದೆ.

ಪದಾರ್ಥಭೇದ – ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ವಿಶಿಷ್ಟ, ಅಂಶ, ಶಕ್ತಿ, ಸಾದೃಶ್ಯ, ಅಭಾವ – ಎಂದು ಹತ್ತು ಪದಾರ್ಥ ಗಳನ್ನು ಈ ದರ್ಶನವು ಅಂಗೀಕರಿಸಿದೆ. ಈ ಪದಾರ್ಥಗಳ ವಿಶೇಷವಿವರಣೆಯು ಸಿದ್ಧಾಂತ ಗ್ರಂಥಗಳಲ್ಲಿ ವಿಸ್ತಾರವಾಗಿ ದೊರೆಯುತ್ತದೆ. ದ್ರವ್ಯವು ಇಪ್ಪತ್ತು ವಿಧವಾಗಿದೆ— ಪರಮಾತ್ಮ ಲಕ್ಷ್ಮಿ, ಜೀವ, ಆಕಾಶ, ಪ್ರಕೃತಿ, ಗುಣತ್ರಯ, ಮಹತ್‌ತತ್ವ, ಅಹಂಕಾರತತ್ವ, ಬುದ್ಧಿ, ಮನಸ್ಸು, ಇಂದ್ರಿಯ, ಮಾತ್ರಾ, ಭೂತ, ಬ್ರಹ್ಮಾಂಡ, ಅವಿದ್ಯ, ವರ್ಣ, ಅಂಧಕಾರ, ವಾಸನ, ಕಾಲ, ಪ್ರತಿಬಿಂಬ; ಇವುಗಳಲ್ಲಿ ವೈಶೇಷಿಕ ಗುಣಗಳಲ್ಲದೆ, ಶಮ, ದಮ, ಕೃಪಾ, ತಿತಿಕ್ಷಾ,ಸೌಂದರ್ಯ ಗುಣ ಗಳೂ ಸೇರುತ್ತವೆ.

ಪರಮಾತ್ಮ :— ಸಾಕ್ಷಾತ್ ವಿಷ್ಣುವೇ ಪರಮಾತ್ಮನು. ಇವನು ಅನಂತಗುಣ ಪರಿ ಪೂರ್ಣನು, ಪ್ರತಿಯೊಂದು ಗುಣವೂ ನಿರವಧಿಕ ಮತ್ತು ನಿರತಿಶಯ. ಉತ್ಪತ್ತಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಆವರಣ, ಬಂಧಮೋಕ್ಷ— ಇವುಗಳ ಕರ್ತಾ ಪರಮಾತ್ಮ. ಅವನು ಸರ್ವಜ್ಞ. ಅವನು ಜೀವ, ಜಡಪ್ರಕೃತಿಗಿಂತ ವಿಲಕ್ಷಣ ವಾಗಿರುವನು. ಮತ್ಸ್ಯ ಕೂರ್ಮಾದಿ ಸ್ವರೂಪಾದಿ ಗಳಿಂದ, ಕರಣಾದಿ ಅವಯವಗಳಿಂದ, ಜ್ಞಾನಾ ನಂದಾದಿ ಗುಣಗಳಿಂದ ಪರಮಾತ್ಮನು ಅಭಿನ್ನನು.

ಲಕ್ಷ್ಮಿ :— ಪರಮಾತ್ಮನ ಶಕ್ತಿಯಾದ ಲಕ್ಷ್ಮಿಯು ಸ್ವಾಮಿಯ ಅಧೀನದಲ್ಲಿರುವಳು. ಅವನಿಂದ ಭಿನ್ನಳು. ಗುಣದಲ್ಲಿ ಪರಮಾತ್ಮನಿ ಗಿಂತ ಕಡಮೆ, ಆದರೆ ಅವಳು ನಿತ್ಯಳು ಮತ್ತು ಮುಕ್ತಳು. ನಾನಾರೂಪಧರಿಸಿ ಪರಮಾತ್ಮ ಪತ್ನಿಯಾಗಿದ್ದಾಳೆ. ಪರಮಾತ್ಮನು ಅಪ್ರಾಕೃತ ದಿವ್ಯ ಶರೀರದಿಂದ ಕೂಡಿರುವಂತೆ, ಲಕ್ಷ್ಮಿಯೂ ಅಪ್ರಾಕೃತ ರೂಪಧರಿಸಿದ್ದಾಳೆ. ಬ್ರಹ್ಮ, ರುದ್ರ– ಇತ್ಯಾದಿ ದೇವತೆ ಶರೀರವು ನಾಶವಾಗುವುದರಿಂದ ಅವಕ್ಕೆ 'ಕ್ಷರ' ಎಂಬ ಹೆಸರಿದೆ. ಆದರೆ ಲಕ್ಷ್ಮಿಯು ದಿವ್ಯವಿಗ್ರಹವತಿಯಾಗಿರುವುದರಿಂದ ಅಕ್ಷರ ಆಗಿರುವಳು. ಪರಮಾತ್ಮನು ದೇಶ ಕಾಲ ಗುಣ ಗಳಿಂದ ಅಪರಿಚ್ಛಿನ್ನವಾಗಿದ್ದಾನೆ. ಲಕ್ಷ್ಮಿಯೂ ಕೂಡ, ಪರಮಾತ್ಮನಗಿಂತ ಗುಣದಲ್ಲಿ ಕಡಮೆ ಯಾಗಿದ್ದರೂ ದೇಶಕಾಲದೃಷ್ಟಿಯಿಂದ ಅವನಿಗೆ ಸಮಾನವಾಗಿ ವ್ಯಾಪಕವಾಗಿರುವಳು.

ಜೀವ :— ಅಜ್ಞಾನ, ಮೋಹ, ದುಃಖ, ಭಯ ಇತ್ಯಾದಿ ದೋಷಯುಕ್ತನಾಗಿ ಜೀವನು ಸಂಸಾರಶೀಲನಾಗಿರುವನು. ಇವನು ಪ್ರಧಾನ ವಾಗಿ ಮುಕ್ತಿ ಭೋಗ್ಯ, ನಿತ್ಯ ಸಂಸಾರಿ, ತಮೋ ಯೋಗ್ಯ–ಎಂದು ಮೂರು ವಿಧವಾಗಿರುವನು. ಮುಕ್ತಿಗೆ ಅಧಿಕಾರಿಗಳಾದ ಜೀವರು ದೇವ, ಋಷಿ, ಪಿತೃ, ಚಕ್ರವರ್ತಿ, ಉತ್ತಮಪುರುಷ ಎಂದು ಐದು ವಿಧ. ನಿತ್ಯ ಸಂಸಾರಿಯಾದ ಜೀವನು ಸದಾ ಸುಖದುಃಖಗಳಿಂದ ಮಿಶ್ರಿತ ನಾಗಿರುವನು. ತನ್ನ ಕರ್ಮಾನುಸಾರ ಉಚ್ಚ ನೀಚಗತಿ ಹೊಂದಿ ಸ್ವರ್ಗ, ನರಕ, ಭೂಲೋಕ ಗಳಲ್ಲಿ ಸಂಚರಿಸುವನು. ಮುಕ್ತ ಜೀವಿಗಳ ಗುಣ ಗಳಲ್ಲಿ ತಾರತಮ್ಯವಿರುವಂತೆ ಅವರ ಆನಂದ ದಲ್ಲಿಯೂ ಭೇದವಿದೆ.

ಸಾಧನಮಾರ್ಗ :— ಶ್ರವಣ, ಮನನ, ಧ್ಯಾನಗಳ ಜೊತೆಯಲ್ಲಿ, ತಾರತಮ್ಯ ಪರಿಜ್ಞಾನ ಮತ್ತು ಪಂಚಭೇದಜ್ಞಾನವಿರಬೇಕೆಂಬುದು ಆಗತ್ಯ. ಇಂತಹ ತಾರತಮ್ಯ ಐದು ವಿಧವಾಗಿದೆ. 1. ಈಶ್ವರ–ಜೀವರಲ್ಲಿ ಭೇದ. 2. ಈಶ್ವರ –

ಶ್ರೀ ಡಿ. ಕೃಷ್ಣ ಅಯ್ಯಂಗಾರ್



ಕೊಬ್ಬರಿ ಗಿಟುಕಿನ ಮೇಲೆ ಬಿಡಿಸಿದ ಶ್ರೀನಿವಾಸಚಿತ್ರ. ಚಿತ್ರ : ಕೆ. ರಾಘವೇಂದ್ರರಾವ್.

ಜಡದಲ್ಲಿ ಭೇದ. 3. ಜೀವ ಮತ್ತು ಜಡದಲ್ಲಿ ಭೇದ. 4. ಜೀವರುಗಳಲ್ಲಿ ಪರಸ್ಪರ ಭೇದ. 5. ಜಡಪದಾರ್ಥಗಳಲ್ಲಿ ಪರಸ್ಪರ ಭೇದ. ಈ ಪಂಚಭೇದಗಳ ಪರಿಜ್ಞಾನವು ಮುಕ್ತಿಗೆ ಸಾಧಕವಾಗುವುದು. ಉಪಾಸನೆಯು ಸತತ ಶಾಸ್ತ್ರಾಭ್ಯಾಸರೂಪ, ಮತ್ತು ಧ್ಯಾನರೂಪ ಎಂದು ಎರಡು ವಿಧ. ಭಗವದ್ವಿಷಯಕವಾದ ಸತತ ಸ್ಮೃತಿಯೇ ಧ್ಯಾನ. ಜೀವನು ಮೋಕ್ಷಕ್ಕಾಗಿ ಪರಮಾತ್ಮಾಧೀನ. ಅಪರೋಕ್ಷಜ್ಞಾನದ ಅನಂತರ ಪರಮ ಭಕ್ತಿ ಉತ್ಪನ್ನವಾಗಿ, ಅನಂತರ ಪರಮ ಅನುಗ್ರಹ ಉಂಟಾಗುತ್ತದೆ. ಆಗ ಮೋಕ್ಷ.

ಮೋಕ್ಷದಲ್ಲಿಯೂ ತಾರತಮ್ಯವಿರುವುದು ಇದು ಸಾಲೋಕ್ಯ. ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂದು ನಾಲ್ಕು ವಿಧ. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯಾದಿ ಭೋಗಗಳು ಭಗವಲ್ಲೋಕದಲ್ಲಿಯೂ ಇತರ ಸ್ವರ್ಗಾದಿ ಲೋಕಗಳಲ್ಲಿಯೂ, ಭಗವತ್ಸ್ವರೂಪ ಸಾಕ್ಷಾತ್ಕಾರ ಸಹಿತನಾಗಿ ಅವರವರ ಇಚ್ಛಾನುಗುಣ ತಾರತಮ್ಯದಿಂದ ಇರುವುವು. ಸಾಯುಜ್ಯವೆಂದರೆ ದೇವತೆಗಳಿಗೆ ಮಾತ್ರ, ಭಗವಂತನ ಶರೀರದಲ್ಲಿ ಅನುಪ್ರವೇಶ ಮಾಡಿ ಆನಂದ ಅನುಭವಿಸುವುದು. ಅನುಪ್ರವೇಶ ಮಾಡಿ ಅಲ್ಲಿಯೇ ಇರಬೇಕೆಂಬ ನಿಯಮವಿಲ್ಲ. ಇಚ್ಛಾನುಗುಣವಾಗಿ ಬೇಕಾದರೆ ಇರಬಹುದು ಅಥವಾ ನಿರ್ಗಮಿಸಬಹುದು. ಅನುಪ್ರವೇಶ ಕಾಲದಲ್ಲಿ ಕೂಡ ಆನಂದಾದಿ ಅನುಭವದಲ್ಲಿ ತಾರತಮ್ಯವಿರುವುದು. ಮುಕ್ತರು ಅಣುಸ್ವರೂಪದಲ್ಲಿದ್ದರೂ ಭಗವದನುಗ್ರಹದಿಂದ ಅವರವರ ಭೋಗಕ್ಕನುಗುಣವಾದ ಆನಂದವನ್ನು ಅನುಭವಿಸುವರು.

ಪ್ರಳಯಕಾಲದಲ್ಲಿ ವೈಕುಂಠಾದಿ ದಿವ್ಯಲೋಕಗಳು ನಾಶವಾಗುವುದಿಲ್ಲ. ಅಲ್ಲಿ ಪರಮಾತ್ಮನು ಲಕ್ಷ್ಮೀಸಮೇತನಾಗಿ ಆನಂದಭೋಗದಲ್ಲಿರುವನು. ಮುಕ್ತಾತ್ಮರಿಗೆ ಸಕಲ ಭೋಗಗಳನ್ನು ಅನುಗ್ರಹಿಸುವನು. ಸರ್ವಲೋಕ ಯೋಗಕ್ಷೇಮದಲ್ಲಿ ನಿರತನಾಗಿರುವನು. ಹೀಗೆ ದ್ವೈತ ದರ್ಶನದಲ್ಲಿ ಮಹಾವಿಷ್ಣುವು ಸರ್ವೋತ್ತಮನು. ಪ್ರಪಂಚ ಸತ್ಯ. ಮಿಥ್ಯೆಯಲ್ಲ. ಜೀವಸಮುದಾಯಗಳು ಪರಮಾತ್ಮನಿಗಿಂತ ಭಿನ್ನ. ಶ್ರೀ ಮಹಾವಿಷ್ಣುವಿನ ದಾಸರು ಅವರು ಮತ್ತು ಪರಮಜ್ಞಾನ ಹೊಂದಿರುವರು.

ಸ್ವರೂಪಾನಂದದ ಅನುಭವವೇ ಮೋಕ್ಷ. ಪರಮ ಭಕ್ತಿಯೇ ಮೋಕ್ಷೋಪಾಯ. ಪ್ರತ್ಯಕ್ಷ, ಅನುಮಾನ, ಶ್ರುತಿ – ಇವು ಮೂರೂ ಪ್ರಮಾಣಗಳು. ಇವುಗಳಿಂದ ತತ್ತ್ವವನ್ನು ತಿಳಿಯಬಹುದು. ಸಕಲ ನಿಗಮಾಗಮಗಳಿಂದ ತಿಳಿಯಬಲ್ಲವನು, ತಿಳಿಯಲ್ಪಡಬೇಕಾದವನು ಜಗನ್ನಿಯಾಮಕನಾದ ಶ್ರೀ ಮಹಾವಿಷ್ಣುವೊಬ್ಬನೇ ವಿನಹ ಮತ್ಯಾರೂ ಅಲ್ಲ.

ದ್ವೈತದರ್ಶನದ ಸಾರವನ್ನು ಹೀಗೆ ಸಂಗ್ರಹಿಸಲಾಗಿದೆ–

ಶ್ರೀಮನ್ಮಧ್ವಮತೇ ಹರಿಃ
ಪರತರಃ ಸತ್ಯಂ ಜಗತ್ತತ್ತ್ವತೋ ।
ಭೇದೋಜೀವಗಣಾ ಹರೇರನುಚರಾಃ
ನೀಚೋಚ್ಚಭಾವಂಗತಾಃ ॥
ಮುಕ್ತಿರ್ನೈಜ ಸುಖಾನುಭೂತಿ
ರಮಲಾ ಭಕ್ತಿಶ್ಚ ತತ್ಸಾಧನಂ ।
ಹ್ಯಕ್ಷಾದಿ ತ್ರಿತಯಂ ಪ್ರಮಾಣ ಮಖಿಲಾ
ಮ್ನಾಯೈಕ ವೇದ್ಯೋಹರಿಃ ॥

———

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| (ರೂ 6–50 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ನಿತ್ಯ ಅರ್ಚನೆ | ಬೆಳಗ್ಗೆ 5–00 ರಿಂದ 5–15 | ಬೆಳಗ್ಗೆ 6–00 ರಿಂದ 6–15 |
| (ರೂ 150/- ವಾರ್ಷಿಕ ಶುಲ್ಕ ನೀಡಿದ ಗೃಹಸ್ಥರನ್ನು ಅನುಮತಿಸಲಾಗುವುದು) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–15 ರಿಂದ 6–15 |
| ಸರ್ವದರ್ಶನ | ,, 5–45 ರಿಂದ 7–00 | ,, 6–15 ರಿಂದ 1–00 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| ( ರೂ 100/- ಶುಲ್ಕದಿಂದ ಇಬ್ಬರಿಗೆ ಅನುಮತಿ ) | | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 1–00 ರಿಂದ 1–30 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 1–30 ರಿಂದ 7–00 |
| ಊಂಜಲ್ ಸೇವೆ (ಮುಖ ಮಂಟಪದಲ್ಲಿ) | ರಾತ್ರಿ 7–00 ರಿಂದ 8–00 (ಶುಲ್ಕ ರೂ 150/- ಗೃಹಸ್ಥರಿಗೆ 5 ಗ್ರಾಂಗಳ ಬೆಳ್ಳಿಯ ಪದಕ ಬಹೂಕರಣವಿದೆ) | — |
| ರಾತ್ರಿ ಗಂಟೆ | ರಾತ್ರಿ 8–00 ರಿಂದ 8–30 | ರಾತ್ರಿ 7–00 ರಿಂದ 7–30 |
| ಸರ್ವದರ್ಶನ | — | ,, 7–30 ರಿಂದ 8–30 |
| ಏಕಾಂತಸೇವೆ | ,, 8–30 ರಿಂದ 9–00 | ,, 8–30 ರಿಂದ 9–00 |

**ಪೇಷ್ಕಾರ್.**

# ಶಿಲ್ಪಕಲಾವೈಭವ

ಭಾರತೀಯ ಸಂಸ್ಕೃತಿಗೆ ವಿವಿಧ ರಾಜರುಗಳು ನೀಡಿದ ಕೊಡುಗೆ ಅಪೂರ್ವವಾದುವುಗಳಾಗಿವೆ. ದೇಶವನ್ನು ಆಳಿದ ಬೇರೆಬೇರೆ ವಂಶದ ರಾಜರು ತಾವು ನಂಬಿಕೊಂಡು ಬಂದಿದ್ದ ದೇವತೆ, ಮತ ಧರ್ಮ ಮತ್ತು ತಮಗಿಷ್ಟವಿರುವ ಲಲಿತಕಲೆಗಳನ್ನು ಆರಿಸಿಕೊಂಡು ದೇವಾಲಯಗಳನ್ನು ಸುಂದರವಾಗಿ ಕಟ್ಟಿಸಿದರು. ಭಾರತದ ಹೆಚ್ಚಿನ ದೇವಾಲಯಗಳೆಲ್ಲಾ ರಾಜರ ಕಾಲದಲ್ಲೇ ಕಟ್ಟಲ್ಪಟ್ಟವುಗಳಾಗಿವೆ. ರಾಜರ ಕಾಲದ ಕಲಾವೈಭವಗಳು ಇಂದು ನಮ್ಮನ್ನು ಆಕರ್ಷಿಸಿ ಯಾತ್ರಾರ್ಥಿಗಳನ್ನಾಗಿ ಮಾಡಿವೆಯಲ್ಲದೆ ಪುಣ್ಯಕ್ಷೇತ್ರಗಳಿಗೆ ತವರುಮನೆ ಎನಿಸಿದೆ.

ದೇವಾಲಯಗಳಲ್ಲಿನ ಕಲೆಯು ಪೌರಾಣಿಕ ಹಿನ್ನೆಲೆಯಿಂದ ಕೂಡಿದ್ದು ನಮಗೆ ಪುರಾಣಗಳ ಇತಿಹಾಸವನ್ನು ಅತೀ ಸರಳರೀತಿಯಲ್ಲಿ ಮನದಟ್ಟು ಮಾಡಿಕೊಡುವಂತಹ ಸಾಧನವಾಗಿವೆ. ಪ್ರತಿಯೊಬ್ಬ ರಾಜರ ಕಾಲದಲ್ಲೂ ಒಂದೊಂದು ಕಡೆಯಲ್ಲಿ ಒಂದೊಂದು ರೀತಿಯ ಶಿಲ್ಪಕಲೆ ಪ್ರಚಾರದಲ್ಲಿತ್ತೆಂದು ಆಯಾಕಾಲದಲ್ಲಿ ಅವರು ನಿರ್ಮಿಸಿದ ಮಂದಿರಗಳಿಂದಲೇ ನಾವು ತಿಳಿಯಬಹುದು. ಕಲಾಪ್ರಪೂರ್ಣತೆಯಿಂದ ನಿರ್ಮಿಸಿದಂತಹ ಮಂದಿರಗಳಿಗೆ ನಾವು ಹೋಗಿ ದೇವರ ದರ್ಶನ ಮಾಡಿ ಬರುವುದು ಮಾತ್ರವಲ್ಲದೆ ಅಲ್ಲಿನ ವೈವಿಧ್ಯತೆಯನ್ನು ಅರ್ಥಮಾಡಿಕೊಂಡು ಜೀವನದಲ್ಲಿ ಆದರ್ಶವನ್ನು ಅನುಸರಿಸಿದರೆ ಮಾತ್ರವೇ ನಮ್ಮ ಯಾತ್ರೆಯು ಸಫಲವಾಗಲು ಸಾಧ್ಯ. ದೇಶದ ಸಂಸ್ಕೃತಿಯನ್ನು ಪುಷ್ಟಿಗೊಳಿಸುವಲ್ಲಿ ರಾಜರುಗಳು ನೀಡಿದ ಪಾತ್ರ ಮಹತ್ತರವಾದದ್ದಾಗಿದೆ.

ಲಲಿತ ಕಲೆಗಳಲ್ಲಿ ಸಂಗೀತ, ಚಿತ್ರ, ಶಿಲ್ಪಗಳು ಪ್ರಧಾನವಾದುವುಗಳಾಗಿವೆ. ಸಂಗೀತಗಾರನು ತನ್ನ ಭಾವನೆಗಳನ್ನು ರಾಗ, ತಾಳ, ಧ್ವನಿಗಳ ಮೂಲಕ ತೋರ್ಪಡಿಸುತ್ತಾನೆ. ಚಿತ್ರಗಾರನು ತನ್ನ ಕುಂಚವನ್ನು ಭಾವನೆಗಳಿಗೆ ತಕ್ಕಂತೆ ತಿರುಗಿಸಿ ಬಣ್ಣವನ್ನಿತ್ತು ರೂಪುಕೊಡುತ್ತಾನೆ. ಶಿಲ್ಪಿಯು ಕಲ್ಲನ್ನೇ ಜೀವಂತವಾಗಿಸಿ ನಕ್ಕು ನಲಿಯುವಂತೆ ಮಾಡುತ್ತಾನೆ. ಬೆಟ್ಟಗುಡ್ಡಗಳಲ್ಲಿರುವ ಕಲ್ಲನ್ನು ಕೆತ್ತಿ ಬೇಕಾದಂತಹ ರೂಪುಕೊಟ್ಟು ವಿಧಧ ವಿಗ್ರಹ ಮೂರ್ತಿಗಳನ್ನು ಸೃಷ್ಟಿಸುವುದರಲ್ಲಿ ಶಿಲ್ಪಿಯ ಶ್ರಮವು ಅದ್ಭುತವಾಗಿದೆ. ಇದರಲ್ಲಿ ನಮಗೆ ಶಿಲ್ಪಿಯ ಅದ್ಭುತವಾದ ಬುದ್ಧಿಸಾಮರ್ಥ್ಯ, ಆದರ್ಶಗಳ ವಿಚಾರವು ತಿಳಿದು ಬರುತ್ತದೆ. ದಕ್ಷಿಣ ಭಾರತದ ದೇವಾಲಯಗಳೆಲ್ಲಾ ಅತೀ ಹಿರಿದಾದ ಗೋಪುರಗಳಿಂದ ರಚಿಸಲಾಗಿದೆ. ಇಂತಹ ಗೋಪುರಗಳು ನಾಜೂಕಾದ ಕೆತ್ತನೆ ಕೆಲಸಗಳಿಂದ ಕೂಡಿದ್ದು ನೋಡಲು ರಮಣೀಯವಾಗಿವೆಯಲ್ಲದೆ ಯಾತ್ರಿಕರನ್ನು ಆಕರ್ಷಿಸುತ್ತವೆ. ಇಂತಹ ಹಿರಿದಾದ ಗೋಪುರಗಳನ್ನು ವಿಮಾನವೆಂದೂ ಕರೆಯುತ್ತಾರೆ. ಚೋಳರ ಕಾಲದಲ್ಲಿ ತಾಂಜಾವೂರಿನಲ್ಲಿ ರಚಿಸಲ್ಪಟ್ಟ ಬೃಹದೀಶ್ವರ ದೇವಾಲಯವು ಒಂದು ಉತ್ತಮ ಶಿಲ್ಪಕಲಾಕೃತಿಯಿಂದ ಕೂಡಿದ್ದಾಗಿದೆ. ಚೋಳರ ಅನಂತರ ಇತರ ರಾಜರುಗಳು ಈ ಬಗೆಯ ಗೋಪುರವುಳ್ಳಂತಹ ದೊಡ್ಡ ದೊಡ್ಡ ದೇವಾಲಯಗಳನ್ನು ಅಲ್ಪಸ್ವಲ್ಪ ವೈವಿಧ್ಯದೊಡನೆ ನಿರ್ಮಿಸುತ್ತಾ ಬಂದರು.

ದೇವಾಲಯಗಳ ರಚನೆಯು ಗಾತ್ರ ಹಿರಿದಾದಂತೆ ಗೋಪುರ, ಮಂಟಪ ಚಾವಡಿಗಳೂ ವಿಶಾಲವಾಗಿ ಅಂದ ಚೆಂದದ ಕೆತ್ತನೆಯಿಂದ ನಮ್ಮನ್ನು ತಮ್ಮೆಡೆಗೆ ಸೆಳೆಯುವಂತೆ ಮಾಡುತ್ತವೆ. ಇಂತಹ ಭವ್ಯತೆ ಮಧುರೆಯ ಮೀನಾಕ್ಷಿ ದೇವಾಲಯಗಳಲ್ಲೂ ಕಾಣಬಹುದು. ಪಾಂಡ್ಯರಾಜರುಗಳು ಮಧುರೆಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡುದು ಮಾತ್ರವಲ್ಲದೆ ದೇವಾಲಯಗಳನ್ನು ಕಟ್ಟಿಸಿದರು. ಅವುಗಳಲ್ಲಿ ಮಧುರೆಯ ಮೀನಾಕ್ಷಿ ದೇವಾಲಯವು ತುಂಬಾ ಪ್ರಸಿದ್ಧಿಯಾಗಿದೆಯಲ್ಲದೆ ಯಾತ್ರಾರ್ಥಿಗಳ ತವರುಮನೆಯೂ ಆಗಿದೆ.

ಪಲ್ಲವರು ಇಡೀ ಕಲ್ಲಿನಿಂದಲೇ ದೇವಾಲಯ, ಮಂದಿರ, ರಥ ಮುಂತಾದುವುಗಳನ್ನು ರಚಿಸುವುದರಲ್ಲಿ ಅಗ್ರಗಣ್ಯರೆನಿಸಿದರು. ಪಲ್ಲವರ ಮಹಾಮಲ್ಲನೆಂಬವನು ಮಹಾಬಲಿಪುರದಲ್ಲಿ ಬಂಡೆಗಲ್ಲುಗಳನ್ನು ಕೊರೆಯಿಸಿ ಅದ್ಭುತ ವಿಗ್ರಹಗಳನ್ನು ಕೆತ್ತಿಸಿದನು. ರಥ, ಮಂದಿರ ಮುಂತಾದುವೂ ಬಂಡೆಗಲ್ಲುಗಳನ್ನೇ ಕೊರೆಯಿಸಿ ಮಾಡಿಸಿದನು. ಇಂತಹ ಶಿಲೆಯ ಚಿತ್ರಣವನ್ನು ನಾವು ಇಂದಿಗೂ ಮಹಾಬಲಿಪುರಂದಲ್ಲಿ ಕಾಣಬಹುದು. ಪಲ್ಲವರ ಕೆತ್ತನೆಯ ಮಾದರಿಯನ್ನನುಸರಿಸಿ ಶ್ರೀಲಂಕಾ, ಆಗ್ನೇಯ ಏಷ್ಯಾದ ಸಯಾಂ, ಕಾಂಬೋಡಿಯಾ, ಮೊದಲಾದ ದ್ವೀಪಗಳಲ್ಲೂ ಇಂತಹ ದೇವಾಲಯಗಳು ರಚಿಸಲ್ಪಟ್ಟವು. ಪಲ್ಲವರು ದಕ್ಷಿಣೆಯಿಂದ ರಾಜ್ಯವಾಳಿದ್ದು ಮಾತ್ರವಲ್ಲದೆ ಹಿಂದೂ ಸಂಸ್ಕೃತಿಯನ್ನು ಧರ್ಮವನ್ನು ದೇಶದಾದ್ಯಂತ ಹರಡಿಸಿದರು.

ಚಾಲುಕ್ಯರು ಕಲಾಪ್ರಿಯರಾಗಿದ್ದರಲ್ಲದೆ ಐಹೊಳೆ, ಪಟ್ಟದಕಲ್ಲು, ಬಾದಾಮಿಗಳಲ್ಲಿ ಸೊಗಸಾದ ದೇವ ಮಂದಿರಗಳನ್ನು ಕಟ್ಟಿಸಿದರು. ಇತರ ಶಿಲ್ಪಕಲೆಗಳಿಗೆ ಇವುಗಳು ಮಾದರಿಯಾಗಿದ್ದುವು. ಗುಹಾಂತರ್ದೇವಾಲಯಗಳೂ ಇವರ ಕಾಲದಲ್ಲಿ ಮುಂದುವರೆದವು. ವಿಷ್ಣು, ಶಿವರಿಗೂ ಗುಹಾಂತರ್ದೇವಾಲಯಗಳುಂಟಾದವು. ಅಜಂತ ಮತ್ತು ಎಲ್ಲೋರಗಳ ವರ್ಣರಂಜಿತ ಶಿಲ್ಪಕಲೆಗಳು ಪ್ರಪಂಚದ ಅದ್ಭುತ ಕಲಾಕೃತಿಗಳ ಶ್ರೇಣಿಯಲ್ಲಿ ಪ್ರಸಿದ್ಧಿಯನ್ನು ಪಡೆದಿವೆ. ಅಜಂತ ಮತ್ತು ಎಲ್ಲೋರ ಮಂದಿರಗಳ ಶಿಲ್ಪಕಲೆಗಳಲ್ಲಿ ಬುದ್ಧನ ಜೀವನಕ್ಕೆ ಸಂಬಂಧಿಸಿದಂತೆ ಅನೇಕ ಕೆತ್ತನೆಯ ಕೆಲಸಗಳನ್ನು ರಚಿಸಿದ್ದಾರೆ. ಜನಸಾಮಾನ್ಯರಲ್ಲಿ ಧಾರ್ಮಿಕಜೀವನ, ಸ್ವಾರ್ಥತ್ಯಾಗ, ಜನಸೇವೆ ಮುಂತಾದ ಆದರ್ಶಗುಣಗಳನ್ನು ಅಜಂತದ ಶಿಲ್ಪಕಲೆಗಳು ಮನದಟ್ಟು ಮಾಡಿಕೊಡುತ್ತವೆ. ಅಜಂತವು ಹೆಸರುವಾಸಿಯಾಗಿರುವುದೇ ಅಲ್ಲಿನ ವರ್ಣಚಿತ್ರಕಲೆಗಳಿಂದ. ಗುಪ್ತರಕಾಲದಲ್ಲೂ ಶಿಲ್ಪಕಲೆಯು ಶ್ರೇಷ್ಠ ಮಟ್ಟದಲ್ಲಿತ್ತೆಂದು ತಿಳಿದು ಬರುತ್ತದೆ. ಗುಪ್ತರಕಾಲದಲ್ಲಿ ದೇವಗಢ ದೇವಸ್ಥಾನ ಕಟ್ಟಲ್ಪಟ್ಟಿತು. ಅದರಲ್ಲಿ ವಿಷ್ಣು ಪುರಾಣದಲ್ಲಿ ಹೇಳಿದಂತೆ ಕೃಷ್ಣನ ಬಾಲ್ಯ ಜೀವನಕ್ಕೆ ಸಂಬಂಧಿಸಿದ ಘಟನೆಗಳನ್ನು ಚಿತ್ರಿಸಿದ್ದಾರೆ. ಗುಪ್ತರ ಕಾಲದ ಶಿಲ್ಪಿಗಳು ಭಾಗವತ, ಹರಿವಂಶ ಮತ್ತು ವಿಷ್ಣುಪುರಾಣಗಳಲ್ಲಿನ ಕತೆಗಳನ್ನು ದೇವಾಲಯಗಳ ಗೋಡೆಗಳ ಮೇಲೆ ಕೆತ್ತಿಸಿದ್ದಾರೆ.

ಚಾಲುಕ್ಯರಾಜರು ವೈದಿಕ ಧರ್ಮದ ಅನುಯಾಯಿಗಳಾಗಿದ್ದರೆಂದು ನಮಗೆ ಇತಿಹಾಸದಿಂದ ತಿಳಿದು ಬರುತ್ತದೆ. ಬಾದಾಮಿ, ಐಹೊಳೆ, ಪಟ್ಟದಕಲ್ಲು ಮುಂತಾದ ಅನೇಕ ಕಡೆಗಳಲ್ಲಿ ದೇವಾಲಯಗಳನ್ನು ನಿರ್ಮಿಸಿ ಪ್ರಸಿದ್ಧಿಯನ್ನು ಹೊಂದಿದ್ದಾರೆ. ವೈದಿಕ ದೇವರುಗಳಾದ ವಿಷ್ಣು ಮತ್ತು ಅವನ ವಿವಿಧ ಅವತಾರಗಳನ್ನು ಶಿವ, ಕಾರ್ತಿಕೇಯ ಮುಂತಾದ ದೇವರ ಮೂರ್ತಿಗಳನ್ನು ಕಲ್ಲಿನಲ್ಲಿ ಕೆತ್ತಲಾಗಿದೆ. ಬಾದಾಮಿಯ ಗುಹಾಲಯಗಳಲ್ಲಿ ನಟರಾಜ, ಅರ್ಧನಾರೀಶ್ವರ,

ಶ್ರೀ ಗಣಪತಿಭಟ್ಟ ಅರ್ತಿಕಜೆ

ಹರಿಹರ, ಮಹಿಷಮರ್ದಿನಿ ಮೊದಲಾದ ಕೆತ್ತನೆಯ ಕೆಲಸಗಳು ಅವರ ಧಾರ್ಮಿಕ ಜೀವನವು ಎಷ್ಟು ಉತ್ತಮ ಸ್ಥಿತಿಯಲ್ಲಿತ್ತೆಂಬುದನ್ನು ತಿಳಿಸುವುದರಲ್ಲಿ ಸಾಕ್ಷಿಯಾಗಿವೆ. ದೇವಾಲಯಗಳಲ್ಲಿ ಕೆತ್ತಿದಂತಹ ಒಂದೊಂದು ಕಲೆಯೂ ನಮ್ಮ ಸಂಸ್ಕೃತಿಯ ಕಥೆಯನ್ನು ನಮಗೆ ತಿಳಿಸುವಂತಹವುಗಳಾಗಿವೆ. ಹಿಂದೆ ಕನ್ನಡಿಗರೂ ಶಿಲ್ಪಕಲೆಯಲ್ಲಿ ನಿಪುಣರಾಗಿದ್ದರೆಂದು ಬಾದಾಮಿಯ ಗುಹಾಂತರ ದೇವಾಲಯಗಳಿಂದಲೇ ನಮಗೆ ತಿಳಿಯುತ್ತದೆ.

ಕನ್ನಡಿಗರಾದ ರಾಷ್ಟ್ರಕೂಟರೂ ಕಲೆಯಲ್ಲಿ ಇತರ ರಾಜರುಗಳಿಂದ ಹಿಂದೆ ಬೀಳದೆ ಅನೇಕ ಧಾರ್ಮಿಕ ತವರುಮನೆಗಳಿಗೆ ಆಶ್ರಯಗಳನ್ನು ಕೊಟ್ಟರು. ಭಾರತದ ಉನ್ನತಕಲಾಸೌಂದರ್ಯವನ್ನು ರಾಷ್ಟ್ರಕೂಟರಾಜರು ಕಲೆಯ ಅಭಿವೃದ್ಧಿಗಾಗಿ ತುಂಬಾ ಹಣವನ್ನು ವೆಚ್ಚಮಾಡಿದ್ದರೆಂದು ಚರಿತ್ರೆಯಿಂದ ತಿಳಿದು ಬರುತ್ತದೆ. ಇವರ ಕಾಲದಲ್ಲಿ ದೊಡ್ಡದೊಡ್ಡ ಕಗ್ಗಲ್ಲಿನಲ್ಲಿ ಕಡೆದಂತಹ ದೇವಾಲಯಗಳು ನಿರ್ಮಾಣಗೊಂಡವು. ರಾಷ್ಟ್ರಕೂಟರ ದೊರೆ ಒಂದನೇಕೃಷ್ಣನು ಒಂದೇ ಒಂದು ಕಗ್ಗಲ್ಲಿನಲ್ಲಿ ಎಲ್ಲೋರದ ಕೈಲಾಸನಾಥ ದೇವಾಲಯವನ್ನು ಕಡೆಸಿದನು. ಇದು ಶ್ರೇಷ ಶಿಲ್ಪಕಲೆಗಳಿಗೆ ಸಾಕ್ಷಿಯಾಗಿದೆಯಲ್ಲದೆ ಭಾರತ ಶಿಲ್ಪಕಲಾದ್ಭುತಗಳಲ್ಲಿ ಒಂದಾಗಿದೆ. ರಾಷ್ಟ್ರಕೂಟರು ಕನ್ನಡಿಗರಾಗಿದ್ದು ಧಾರ್ಮಿಕ ಕಲೆ, ಸಾಹಿತ್ಯಗಳಿಗೆ ಅಪಾರ ಪ್ರೋತ್ಸಾಹವನ್ನು ಕೊಟ್ಟರು.

ಹೊಯ್ಸಳರು ಸೋಮನಾಥಪುರ, ಬೇಲೂರು, ಹಳೆಬೀಡುಗಳಲ್ಲಿ ಭವ್ಯವಾದ ದೇವಾಲಯಗಳನ್ನು ಕಟ್ಟಿಸಿದರು. ಶಿಲ್ಪಿಗಳು ಭವ್ಯವಾದ ದೇವಾಲಯಗಳ ಗೋಡೆಗಳಲ್ಲಿ ನಾನಾವನ್ಯಜಂತು, ಪ್ರಾಣಿಗಳ ಪಕ್ಷಿಗಳ ಕೆತ್ತನೆಯನ್ನು ಕೆತ್ತಿದ್ದಾರೆ. ಬೇಲೂರು ಹಳೆಬೀಡು ದೇವಾಲಯಗಳಲ್ಲಿ ಪುರಾಣಕ್ಕೆ ಸಂಬಂಧಿಸಿದಂತೆ ಅನೇಕ ದೇವದೇವಿಯರ ಚಿತ್ರಗಳೂ ಶಿಲಾಬಾಲಿಕೆಯರ ವಿಗ್ರಹಗಳನ್ನು ಅತೀಸುಂದರವಾಗಿ ಕೆತ್ತಿದ್ದಾರೆ.

ಜೈನಧರ್ಮಕ್ಕೆ ಸಂಬಂಧಿಸಿದಂತೆ ಅನೇಕ ದೇವಾಲಯಗಳೂ ಇರುವುವು. ಅವುಗಳೂ ಬಹುಮಟ್ಟಿಗೆ ಶಿಲ್ಪಕಲಾವೈಭವಗಳಿಂದಲೇ ಕೂಡಿವೆ. ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜೈನರ ಸಾವಿರ ಕಂಬದ ಬಸದಿಯೂ ಇದೆ. ಅಲ್ಲಲ್ಲಿ ಜೈನರ ಬಾಹುಬಲಿಯ ಮೂರ್ತಿಯನ್ನು ಅಂದ ಚೆಂದದಿಂದ ಕೆತ್ತುತ್ತ ಬಂದಿದ್ದಾರೆ. ಬೌದ್ಧರು ಸನ್ಯಾಸಿಗಳ ಅವಶೇಷಗಳನ್ನು ಹುಗಿದು ಅವುಗಳ ಮೇಲೆ ನಿರ್ಮಿಸುವ ಸ್ಮಾರಕಕ್ಕೆ ಸ್ತೂಪವೆಂದು ಕರೆಯುವರು. ಇವುಗಳು ಬೌದ್ಧರ ಪ್ರಾರ್ಥನಾಮಂದಿರವೂ ಹೌದು. ಸ್ತೂಪಗಳಲ್ಲಿ ಸಾಂಚಿಯಲ್ಲಿ ನಿರ್ಮಿಸಿದಂತಹ ಸ್ತೂಪವು ಭಾರತದಲ್ಲಿ ಅತೀದೊಡ್ಡದಾಗಿದೆ.

ಹನ್ನೊಂದನೆಯ ಶತಮಾನದ ನಂತರ ಭಾರತವು ಮುಸಲ್ಮಾನರ ಆಡಳಿತಕ್ಕೆ ಒಳಗಾಯಿಯಿತು. ಆಗ ಬಂದ ಮುಸಲ್ಮಾನ ರಾಜರೂ ಇನ್ನೊಂದು ರೀತಿಯ ಶಿಲ್ಪಕಲೆಗೆ ಬುನಾದಿ ಹಾಕಿದರು. ಮೊಗಲರ ಕಾಲದಲ್ಲಿ ಉತ್ತರ ಹಿಂದೂಸ್ಥಾನದಲ್ಲಿ ಹಲವು ಅಂದವಾದ ಚಂದ್ರಶಾಂತ ಶಿಲೆಯ ರಚನೆಗಳಾದುವು. ಅವುಗಳಲ್ಲಿ ವಿಶ್ವದ ಜನರನ್ನು ಆಕರ್ಷಿಸುವ ಮನೋಹರವಾದ ಸ್ಮಾರಕ ಕಟ್ಟಡವು "ತಾಜಮಹಲ್" ಎಂಬ ಹೆಸರಿನಿಂದ ಪ್ರಸಿದ್ಧಿಯಾಗಿದೆ.

ಕೃಷ್ಣದೇವರಾಯನ ಕಾಲದಲ್ಲಿ ಅಷ್ಟದಿಗ್ಗಜರೆಂಬ ಎಂಟುಮಂದಿ ಕವಿಗಳು ಆತನ ಆಸ್ಥಾನದಲ್ಲಿದ್ದು ಧರ್ಮಸಾಹಿತ್ಯ, ಕಲೆಗಳಿಗೆ ಪ್ರೋತ್ಸಾಹ ನೀಡಿದವರಾಗಿದ್ದರು. ಹಂಪೆಯಲ್ಲಿ ನಾವು ಇಂದಿಗೂ ಆ ಕಾಲದ ಭವ್ಯತೆಯ ವಿಶಿಷ್ಟವನ್ನು ಕಾಣಬಹುದು. ಭಾರತದ ದೇವಾಲಯಗಳ ಅಂದಚಂದಗಳಿಗೆ ಪ್ರೋತ್ಸಾಹನೀಡಿ ಇಡೀ ವಿಶ್ವವನ್ನೇ ಬೆರಗು ಗೊಳಿಸಿ ಕಲ್ಲನ್ನು ನಕ್ಕುನಲಿಯುವಂತೆ ಮಾತಾಡಿಸಿದ ಶಿಲ್ಪಿಗಳಿಗೆ ಭಾರತದೇಶದ ಜನರು ಚಿರ ಋಣಿಗಳಾಗಿದ್ದಾರೆ.



---

(8ನೇ ಪುಟದಿಂದ)

ಇನ್ನು, ಬೇರೆ ಬೇರೆ ಆಚಾರ್ಯರುಗಳ ಭಾಷ್ಯ ಗ್ರಂಥಗಳನ್ನು ವಿಮರ್ಶಿಸುವಾಗ ಅವರು ತೋರುವ ಉದಾರ ಭಾವನೆ ಬೇರೆಯವರಲ್ಲಿ ಕಾಣುವುದು ಅಪರೂಪ. ವಿಶುದ್ಧ ಬುದ್ಧಿಯಿಂದ ಬೇರೆ ಮತಾಚಾರ್ಯರುಗಳ ಭಾಷ್ಯಗಳನ್ನು ಅವಲೋಕಿಸುವಾಗ ಅವರ ಭಾಷ್ಯಗಳಿಗೂ ಸತ್ಸೂತ್ರಗಳಿಗೂ ಹೊಂದಾಣಿಕೆಯೇ ಕಾಣದಿದ್ದಾಗ ಆಶ್ಚರ್ಯಚಕಿತರಾಗುತ್ತಾರೆ.

ಕರ್ಮಕ್ಕೂ, ದೈವಕ್ಕೂ ನಂಟು ಹಾಕಿ ತಮ್ಮ ಕರ್ತವ್ಯದಿಂದ ವಿಮುಖರಾಗುವವರನ್ನು ಮಧ್ವರು ಖಂಡಿಸುತ್ತಾರೆ. ಅಂತಹ ಜನರು ಅಧೋಗತಿಯನ್ನೇ ಹೊಂದುತ್ತಾರೆ ಎಂದು ಘಂಟಾಘೋಷವಾಗಿ ಸಾರಿದ್ದಾರೆ. (ಈಶ್ವರೋ ಯದಿ ಸರ್ವಸ್ಯ। ಕಾರಕಃ ಕಾರಯೇತ ಮಾಂ। ಇತ್ಯೇವಂ ವಾದಿನಂ ಬ್ರೂಯಾತ್ ಸದ್ಮಾಧೋ ಯಾಸ್ಯತೀತಿಹ).

ಹಾಗಾದರೆ ಜ್ಞಾನಿಯಾದವನು ಏನು ಮಾಡುತ್ತಾನೆ ಎಂದರೆ "ವಿದ್ವಾನ್ ಜೀವಂ ವಿಷ್ಣುವಶೇ ವಿದಿತ್ವಾ ಕರೋತಿ ಕರ್ತವ್ಯ ಮಜಸ್ರಮೇವ" ಅಂದರೆ ಜ್ಞಾನಿಯಾದವನು ತಾನು ಪರಮಾತ್ಮನ ಅಧೀನವೆಂದು ತಿಳಿದು ತನ್ನ ಕರ್ತವ್ಯವನ್ನು ಮಾಡುತ್ತಾನೆ ಎಂದಿದ್ದಾರೆ.

ಇನ್ನು ಜೀವರುಗಳು ಹಾಳು ಹರಟೆ, ಸಂಸಾರ ಬಂಧನಗಳಿಂದ ತೊಳಲುತ್ತಿರುವುದನ್ನು ನೋಡಿ ಕನಿಕರದಿಂದ ಶ್ರೀ ಮಧ್ವರು "ತದಲಂ ಬಹುಲೋಕ ವಿಚಿಂತನಯಾ ಪ್ರವಣಂ ಕುರು ಮಾನಸ ಮೀಶ ಪದೇ" ಎಂದು ಉಪದೇಶಿಸಿದ್ದಾರೆ.

ಇಂತಹ ಹರಿಭಕ್ತರೂ, ಕೃಪಾಳುಗಳೂ, ವೈರಾಗ್ಯ ಶಿರೋಮಣಿಗಳೂ ಆದ ಗುರು ಮಧ್ವರನ್ನು ವಾದಿರಾಜರು "ತಪಸ್ವಿತಾಯಾಂ, ಹರಿಭಕ್ತತಾಯಾಂ, ವಿಪಶ್ಚಿತಾಂ ಸಂಸದಿ ಪೂಜ್ಯತಾಯಾಂ। ಕೃಪಾಲುತಾಯಾಂ ಸುವಿರಕ್ತತಾಯಾಂ ವಿಪದ್ರಿಪೋರ್ಮಧ್ವಮುನೇಃ ಸಮಃ ಕಃ" ಎಂದು ಮನತುಂಬಿ ಸ್ತುತಿಸಿದ್ದಾರೆ. ಇಂತಹ "ಮಧ್ವರಾಯರ ಕರುಣೆ ಪಡೆಯದವ ಧರೆಯೊಳಿರೆ ಇದ್ದರೇನು ಇಲ್ಲದಿದ್ದರೇನು" ಎಂದು ವಿಜಯದಾಸರು ವರ್ಣಿಸಿರುವುದು ಎಷ್ಟು ಔಚಿತ್ಯಪೂರ್ಣ!

ಹೀಗೆ ಮಧ್ವಾಚಾರ್ಯರು ಒಬ್ಬ ದಾರ್ಶನಿಕರಾಗಿ, ಒಬ್ಬ ಸಮಾಜ ಸುಧಾರಕರಾಗಿ, ಭಾಷ್ಯಕಾರರಾಗಿ, ವಿಮರ್ಶರಾಗಿ, ಪವಾಡಪುರುಷರಾಗಿ, ಜ್ಞಾನಿವರೇಣ್ಯರಾಗಿ, ಭಕ್ತಶ್ರೇಷ್ಠರಾಗಿ ಭಾರತೀಯ ವೇದಾಂತ ಪ್ರಪಂಚದಲ್ಲಿ ಅತ್ಯುನ್ನತ ಸ್ಥಾನವನ್ನು ಅಲಂಕರಿಸಿದ್ದಾರೆ. ಇಂತಹ ಮುನಿವರ್ಯರಿಂದಲೇ ನಮ್ಮ ಆತ್ಮೋದ್ಧಾರ ಸಾಧ್ಯ, ಅಂತೆಯೇ ವಾದಿರಾಜ ಪೂಜ್ಯಚರಣರು "ಗುರು ಮಧ್ವರಾಯರೇ ಆತ್ಮರಕ್ಷಕರೆಂದು ಅನಲ ಕೈಯಲ್ಲಿ ಪಿಡಿಯಲೋ" ಎಂಬುದಾಗಿ ಭಕ್ತ್ಯುದ್ರೇಕದಿಂದ ಶಪಥಮಾಡಿರುತ್ತಾರೆ.

* * * *

# ಜೈನಧರ್ಮ ಹಾಗೂ ಕರ್ನಾಟಕ

ಡಾ|| ಎನ್. ಅನಂತರಂಗಾಚಾರ್

ಬೌದ್ಧಮತಕ್ಕೆ ಸುಮಾರು ಸ್ವಲ್ಪ ಹಿಂದೆ ಜೈನಮತವು ಉದ್ಭವಿಸಿತು. ಜಿನನಿಗೆ ಸಂಬಂಧಪಟ್ಟ ಮತವಾದುದರಿಂದ ಇದಕ್ಕೆ ಜೈನಮತವೆಂಬ ಹೆಸರು ರೂಢಿಗೆ ಬಂದಿದೆ. ಜಿನನೆಂದರೆ ಕರ್ಮಗಳನ್ನು ಜಯಿಸಿರುವವನು ಎಂದರ್ಥ. ಜಿನನಲ್ಲಿ ಭಕ್ತಿಮಾಡುವವರು ಜೈನರು. ಜಿನನಿಗೆ ಅರ್ಹತ್, ಪರಮೇಶ್ವರ, ತೀರ್ಥಂಕರ, ಪರಮೇಷ್ಠಿ, ವೀತರಾಗ, ಪರಮಾತ್ಮ ಎಂಬ ಹೆಸರುಗಳೂ ಉಂಟು, ಜಿನರಿಗೂ ತೀರ್ಥಂಕರರಿಗೂ ವ್ಯತ್ಯಾಸವುಂಟು. ಕರ್ಮದಿಂದ ಬಿಡುಗಡೆಯಾದವರೆಲ್ಲರೂ ಜಿನರೇ. ಇಂತಹವರಲ್ಲಿ ಪ್ರಖ್ಯಾತರಾದ ೨೪ ಜನರು ತೀರ್ಥಂಕರರು. ಋಷಭ ಅಥವಾ ಆದಿಸೇನ ಮೊದಲನೆಯವ. ಪಾರ್ಶ್ವನಾಥ ೨೩ ನೆಯವನು. ಮಹಾವೀರ ೨೪ನೆಯವನು. ವರ್ಧಮಾನ ಮಹಾವೀರನು ಕ್ರಿ. ಪೂ. ೫೯೯ ರಿಂದ ೫೨೭ರವರೆಗೆ ಜೀವಿಸಿದ್ದನು. ಇವನಿಗಿಂತ ಸುಮಾರು ೨೫೦ ವರ್ಷಗಳ ಹಿಂದೆ ಪಾರ್ಶ್ವನಾಥನಿದ್ದದ್ದು. ಮಹಾವೀರನು ಬುದ್ಧನಿಗಿಂತ ಹಿಂದೆ ಇದ್ದವನೆಂದು ತಿಳಿದು ಬಂದಿದೆ. ಈತನೇ ಜೈನಮತ ಪ್ರಚಾರಕ. ಈತನು ಪ್ರಚಾರಮಾಡಿದವನೇ ವಿನಾ ಸ್ಥಾಪಿಸಿದವನಲ್ಲ. ಇವನಿಗೆ ಹಿಂದೆ ಅನಾದಿಯಾಗಿದ್ದ ಮತವನ್ನು ೨೩ ತೀರ್ಥಂಕರರು ತಮ್ಮ ಉಪದೇಶಾದಿಗಳಿಂದ ಅಭಿವೃದ್ಧಿಪಡಿಸಿದುದನ್ನು ಮಹಾವೀರನು ಸ್ಥಿರವಾಗಿ ಸ್ಥಾಪಿಸಿದನೆಂಬುದು ಸಂಪ್ರದಾಯದ ನಂಬಿಕೆ.

ಜೈನರ ಪ್ರಕಾರ ಆತ್ಮವು ಪ್ರಕೃತಿಯಿಂದ ಭಿನ್ನ. ಆತ್ಮಗಳು ಅನೇಕ. ಜೈನರು ಕರ್ಮ ಮತ್ತು ಜನ್ಮಾಂತರಗಳಲ್ಲಿ ಪೂರ್ಣನಂಬಿಕೆಯುಳ್ಳವರು. ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮವೆ ಈ ಜನ್ಮದ ಜ್ಞಾನವು ತನ್ನಷ್ಟಕ್ಕೆ ತಾನೆ ಪ್ರಕಾಶವಾಗದಂತೆ ತಡೆಯುವುದು. ಅಂದರೆ ಈ ಭೌತ ಶರೀರವು ಆತ್ಮನನ್ನು ಪ್ರಗತಿಪಥದಲ್ಲಿ ನಡೆಯಲು ಅವಕಾಶವನ್ನು ಕೊಡುವುದಿಲ್ಲ. ಆದುದರಿಂದ ಇವುಗಳಿಗೆ ಆವರಣವೆಂದು ಹೆಸರು. ರತ್ನತ್ರಯಗಳಾದ ಸಮ್ಯಕ್‌ಜ್ಞಾನ, ಸಮ್ಯಕ್‌ದರ್ಶನ ಮತ್ತು ಸಮ್ಯಕ್ ಚಾರಿತ್ರ್ಯಗಳಿಂದ ಆವರಣರೂಪವಾದ ಶರೀರವನ್ನು ನಾಶಪಡಿಸಿಕೊಳ್ಳಬಹುದು. ಜೈನದರ್ಶನದಲ್ಲಿ ಪೂರ್ಣನಂಬಿಕೆಯಿಡುವುದು ಸಮ್ಯಗ್ದರ್ಶನ. ಅದನ್ನು ಪೂರ್ವಾಚಾರ್ಯರ ಮೂಲಕ ತಿಳಿದುಕೊಳ್ಳುವುದು ಸಮ್ಯಕ್‌ಜ್ಞಾನ, ಆತ್ಮವನ್ನು ಇಹಲೋಕದೊಡನೆ ಬಂಧನ ಮಾಡುವುದಕ್ಕೆ ಕಾರಣವಾದ ಪಾಪಗಳಿಂದ ದೂರವಾಗಿರುವುದು ಸಮ್ಯಕ್ ಚಾರಿತ್ರ್ಯ. ಈ ರತ್ನತ್ರಯಾನುಷ್ಠಾನಕ್ಕೆ ಪಂಚಾಣುವ್ರತಗಳಾದ ಅಹಿಂಸಾ, ಅಸ್ತೇಯ, ಅಪರಿಗ್ರಹ, ಬ್ರಹ್ಮಚರ್ಯ ಮತ್ತು ಸತ್ಯ ಎಂಬಿವು ಮೂಲಾಧಾರ. ಇವುಗಳಲ್ಲಿ ಈ ಮತದ ಪ್ರಕಾರ ಅಹಿಂಸೆಗೆ ಬಹು ಮುಖ್ಯವಾದ ಸ್ಥಾನ. ಸಂಕಲ್ಪ ಹಿಂಸೆಯೂ ಪಾಪಕರ. ವ್ರತತಪಸ್ಸುಗಳೆ ಮೋಕ್ಷಕ್ಕೆ ಸಾಧನ. ಬಂಧನದಿಂದ ಬಿಡುಗಡೆ ಹೊಂದುವುದೇ ತಪಸ್ಸಿನ ಫಲ. ಇದಕ್ಕೆ ಮೋಕ್ಷವೆಂದು ಹೆಸರು. ಮೋಕ್ಷಸ್ಥಿತಿಯಲ್ಲಿ ಆತ್ಮವು ಪ್ರಪಂಚದ ಎಲ್ಲ ಆಶೆ ಆತಂಕಗಳಿಂದಲೂ ದೂರವಾಗಿರುತ್ತದೆ. ದುಃಖಕಾರಣವು ಪೂರ್ಣವಾಗಿ ನಾಶವಾಗಿ ಆತ್ಮವು ಸರ್ವಜ್ಞತ್ವದಿಂದ ಪೂರ್ಣಾನಂದ ಸ್ಥಿತಿಯಲ್ಲಿರುತ್ತದೆ. ಈ ಸ್ಥಿತಿಗೆ 'ಅರ್ಹತ್ ಪದವಿ'ಯೆಂದು ಹೆಸರು. ಆಗ ಆತ್ಮನಿಗೆ ಪರಮೇಶ್ವರನೆಂಬ ಅಭಿದಾನ ಉಂಟಾಗುತ್ತದೆ. ವಸ್ತುಗಳು ಜ್ಞಾನಾತಿರಿಕ್ತವಾಗುವುವು. ಜ್ಞಾತೃವಾದ ಆತ್ಮನೇ ಜೀವನು. ಮಿಕ್ಕ ವಸ್ತುಗಳು ಅಜೀವಗಳು. ಅಜೀವವಸ್ತುಗಳಲ್ಲಿ ಜಡವಸ್ತುಗಳು ಪರಮಾಣುಗಳಿಂದುಂಟಾಗುವುವು. ಪರಮಾಣುವು ಬೇಕಾದ ಪರಿಣಾಮವನ್ನೂ ಆಕಾರವನ್ನೂ ಪಡೆಯಬಹುದು. ವಸ್ತುಗಳು ಸರ್ವಥಾ ಕ್ಷಣಿಕವಲ್ಲ. ಈ ಮತದ ಪ್ರಕಾರ ಮುಕ್ತರಾದ ಜೀವವೆಲ್ಲ ದೇವರೇ. ಅವರಿಂದ ಭಿನ್ನವಾದ ಬೇರೊಬ್ಬ ದೇವರಿಲ್ಲ. ಪ್ರಪಂಚದಲ್ಲಿ ಯಾರು ಬೇಕಾದರೂ ರತ್ನತ್ರಯಾನುಷ್ಠಾನದಿಂದ ಪೂರ್ಣತೆಯನ್ನು ಪಡೆದು ದೇವರಾಗಬಹುದು. ದೇವರ ಸಂಖ್ಯೆಗೂ ಮಿತಿಯಿರಬೇಕಾಗಿಲ್ಲ. ಜಗದ್ವ್ಯಾಪಾರವನ್ನು ನಡೆಸಲು ಬೇರೊಬ್ಬ ಈಶ್ವರನ ಸಹಾಯ ಬೇಕಾಗಿಲ್ಲ. ಕರ್ಮಸಹಿತರಾದ ಜೀವರು ಪ್ರಪಂಚವ್ಯಾಪಾರವನ್ನು ನಡೆಸಲು ಶಕ್ತರಾಗುವರು.

ತತ್ತ್ವಗಳು ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ ಮತ್ತು ಮೋಕ್ಷ ಎಂದು ಏಳು ಬಗೆಯಾದುವು. ಜೀವನಿಗೆ ಪ್ರಾಕೃತವಾದ ಶರೀರ ಸಂಬಂಧವುಂಟಾಗಲು ಕರ್ಮವೇ ಕಾರಣ. ಕರ್ಮವೇ ಜೀವನಿಗೆ ಬಂಧನವನ್ನುಂಟುಮಾಡುವ ವಸ್ತು. ಜೀವನಿಗೆ ಅವನಲ್ಲಿರುವ ಅಜ್ಞಾನಾದಿ ದೋಷಗಳಿಂದ ಕರ್ಮವು ಅವನ ಸಮೀಪಕ್ಕೆ ಬರುವುದು. ಈ ಕರ್ಮದ ಚಲನೆಗೆ 'ಆಸ್ರವ'ವೆಂದು ಹೆಸರು. ಅನಂತರ ಜೀವನಿಗೆ ಕರ್ಮ ಸಂಬಂಧವುಂಟಾಗುವುದು. ಇದಕ್ಕೆ ಬಂಧವೆಂದು ಹೆಸರು. ಸಮ್ಯಗ್ದರ್ಶನಾದಿಗಳಿಂದ ಕರ್ಮವನ್ನು ತಡೆಯಬಹುದು. ಇದಕ್ಕೆ 'ಸಂವರ'ವೆಂದು ಹೆಸರು. ಅದರ ಫಲವಾಗಿ ಕರ್ಮವು ನಾಶವಾಗುವುದು. ಇದಕ್ಕೆ 'ನಿರ್ಜರೆ'ಯೆಂದು ಹೆಸರು. ಕರ್ಮನಾಶದಿಂದ ಜೀವನು ಕರ್ಮರಹಿತನಾಗುವನು. ಇದಕ್ಕೆ 'ಮೋಕ್ಷ' ಅಥವಾ 'ನಿರ್ವಾಣ'ವೆಂದು ಹೆಸರು. ಈ ಮತಕ್ಕೆ 'ಸ್ಯಾದ್ವಾದ' ವೆಂದೂ 'ಸಪ್ತಭಂಗೀನ್ಯಾಯ' ವೆಂದೂ ಹೆಸರುಗಳು ಉಂಟು.

ಮಹಾವೀರನ ನಂತರ ಜೈನರು ದಿಗಂಬರ ಮತ್ತು ಶ್ವೇತಾಂಬರ ಎಂಬುದಾಗಿ ವಿಭಾಗವಾದರು. ಮೋಕ್ಷಸಾಧನೆಗಾಗಿ ದಿಗಂಬರರು ತಮಗೆ ಸೇರಿದ ಎಲ್ಲವನ್ನೂ–ಬಟ್ಟೆಯನ್ನೂ–ತ್ಯಾಗ ಮಾಡುವರು. ಇವರ ಪ್ರಕಾರ ಸ್ತ್ರೀಯರು ಮೋಕ್ಷಕ್ಕೆ ಅರ್ಹರಲ್ಲ. ಶ್ವೇತಾಂಬರರು ಬಿಳಿಯ ಬಟ್ಟೆಯನ್ನು ಧರಿಸುವರು. ಇವರ ಪ್ರಕಾರ ಸ್ತ್ರೀಯರಿಗೂ ಮೋಕ್ಷಕ್ಕೆ ಅರ್ಹತೆಯುಂಟು.

ಜೈನಶಾಸ್ತ್ರವು ಹನ್ನೆರಡು 'ಅಂಗ' ಮತ್ತು ಹದಿನಾಲ್ಕು 'ಪೂರ್ವ'ಗಳೆಂದು ಎರಡು ವಿಧ. ಈ ಅಪಾರ ಗ್ರಂಥರಾಶಿ ಖಿಲವಾಗುತ್ತಾ ಬಂದು ಈಗ ಅದರ ಏಕದೇಶಮಾತ್ರ ಉಳಿದಿದೆಯೆಂದು ಜೈನರು ಅಭಿಪ್ರಾಯ ಪಡುತ್ತಾರೆ. ಜೈನಶಾಸ್ತ್ರದ ಸಾರಸಂಗ್ರಹ ರೂಪವಾಗಿ ಪ್ರಾಕೃತದಲ್ಲಿಯೂ ಸಂಸ್ಕೃತದಲ್ಲಿಯೂ ಅನೇಕ ಗ್ರಂಥಗಳಿರುವುವು. ಜೈನರ ಪವಿತ್ರಗ್ರಂಥಗಳಿಗೆ 'ಸಿದ್ಧಾಂತ' ಮತ್ತು 'ಆಗಮ'ಗಳೆಂದು ಹೆಸರು. ಭದ್ರಬಾಹುವೇ ಜೈನರಲ್ಲಿ ಪ್ರಪ್ರಥಮ ಗ್ರಂಥಕಾರ. ಈ ಮತವು ಶ್ರುತಿಯ ಪ್ರಾಮಾಣ್ಯವನ್ನು ಅಂಗೀಕರಿಸುವುದಿಲ್ಲ. ಜೈನರಿಗೆ 'ತೀರ್ಥಂಕರ' ಮತ್ತು ಅರ್ಹಂತರ ಜೀವನಗಳೇ ಆದರ್ಶಗಳು. ಕಾರ್ಯಕಾರಣವನ್ನು ಬಯಸುವ ವಿಚಾರಪರತೆಗೂ ನೈತಿಕ ಪರಿಪೂರ್ಣತೆಗೂ ಗಮನಕೊಡುವ ಕರ್ಮಾಚರಣೆಗಳಿಗೂ ಹೆಚ್ಚು ಲಕ್ಷ್ಯವನ್ನು ಕೊಡುವ ಈ ಜೈನಮತವು ಬಹುಬೇಗ ದೇಶದಲ್ಲೆಲ್ಲಾ ಹರಡಿತು. ಎಲ್ಲ ವರ್ಗದವರಿಗೂ ಒಂದೇ ವಿಧವಾದ ಆಶ್ರಯವನ್ನೂ ಸ್ಥಾನವನ್ನೂ ಕೊಡಲು ಸಿದ್ಧವಾದುದರಿಂದ ಎಲ್ಲರೂ ಈ ಮತವನ್ನೇ ಅಂಗೀಕರಿಸಿದರು.

ಕಡೆಯ ಶ್ರುತಕೇವಲಿ ಭದ್ರಬಾಹು ಮತ್ತು ಮೌರ್ಯಸಾಮ್ರಾಟ ಚಂದ್ರಗುಪ್ತರು ಕ್ರಿ. ಪೂ. ಮೂರನೆಯ ಶತಮಾನದಲ್ಲಿ ಉತ್ತರದೇಶದಲ್ಲುಂಟಾಗಬಹುದಾದ ದ್ವಾದಶ ವರ್ಷದ ಕ್ಷಾಮದ ಭಯದಿಂದ ಶ್ರವಣಬೆಳಗೊಳಕ್ಕೆ ಬಂದು ನಿಂತುದರಿಂದ ಜೈನಮತವು ಕರ್ನಾಟಕದಲ್ಲಿ ಬೇರೂರಿ ನಿಂತಿತು. ಇವರು ದಿವ್ಯಜ್ಞಾನದಿಂದ

ಜೈನಸಂಘವನ್ನು ದಕ್ಷಿಣಕ್ಕೆ ತಂದರೆಂದೂ 'ಕಟವಪ್ರ' ಅಥವಾ 'ಕಳ್ವಪ್ಪು' (ಚಂದ್ರಗಿರಿ) ಎಂಬ ಬೆಟ್ಟದಲ್ಲಿ ಅವರೂ ಅವರ ಶಿಷ್ಯನಾದ ಚಂದ್ರಗುಪ್ತನೂ ಸಲ್ಲೇಖನ ವ್ರತದಿಂದ ಸಮಾಧಿಯನ್ನು ಹೊಂದಿದರೆಂದೂ ಶ್ರವಣಬೆಳಗೊಳದ ಒಂದು ಶಾಸನದಲ್ಲಿ ಉಲ್ಲೇಖವಾಗಿದೆ. ಕ್ರಿ. ಶ. ದ ಪ್ರಾರಂಭದಿಂದ ಇಲ್ಲಿಯವರೆಗೆ ಜೈನಮತಾವಲಂಬಿಗಳು ಇಲ್ಲಿ ವಾಸಿಸಿರುವರು. ಕರ್ನಾಟಕದ ಪ್ರಸಿದ್ಧ ಅರಸು ಮನೆತನಗಳು ಒಂದಲ್ಲೊಂದು ರೀತಿಯಲ್ಲಿ ಜೈನಮತಕ್ಕೆ ಪ್ರೋತ್ಸಾಹವನ್ನು ಕೊಟ್ಟಿರುವುವು. ಕೆಲವರು ಈ ಮತದ ಅನುಯಾಯಿಗಳಾಗಿದ್ದರು. ಅಂತಹವರಲ್ಲಿ ತಲಕಾಡಿನ ಗಂಗರೂ ಮಳಖೇಡದ ರಾಷ್ಟ್ರಕೂಟರೂ ಹಳೆಯ ಬೀಡಿನ ಹೊಯ್ಸಳರೂ ಪ್ರಮುಖರು. ಗಂಗವಂಶದ ಮೊದಲನೆಯ ಕೊಂಗಣಿವರ್ಮನು ಅರ್ಹದ್ಭಟ್ಟಾರಕರಾದ ಸಿಂಹನಂದ್ಯಾಚಾರ್ಯರವರಿಂದ ರಾಜ್ಯವನ್ನು ಪಡೆದನೆಂದು ಕೂಡ್ಲೂರು ಶಾಸನದಲ್ಲಿ ಹೇಳಿದೆ. ಗಂಗರೂ ಕ್ರಿ.ಶ. ೨೦೦ ರಿಂದ ೧೨೦೦ ರವರೆಗೆ ಜೈನಮತಕ್ಕೆ ದೊಡ್ಡ ಆಶ್ರಯವನ್ನು ಕೊಟ್ಟು ಅದರ ಅಭ್ಯುದಯಕ್ಕೆ ಕಾರಣರಾಗಿದ್ದಾರೆ. ರಾಷ್ಟ್ರಕೂಟರಲ್ಲಿ ಅನೇಕ ಅರಸರು ಸ್ವತಃ ಜೈನಮತವನ್ನು ಸ್ವೀಕರಿಸಿ ಗ್ರಂಥಗಳನ್ನು ರಚಿಸಿ ಎಲ್ಲ ರೀತಿಯಿಂದಲೂ ಜೈನಮತಕ್ಕೆ ಆಶ್ರಯವನ್ನು ಕೊಟ್ಟಿದ್ದಾರೆ. ಇವರ ಅಭ್ಯುದಯ ಕಾಲದಲ್ಲಿ ದೊಡ್ಡ ಜೈನವಿದ್ವಾಂಸರಿಗೆ ಪ್ರೋತ್ಸಾಹ ಕೊಟ್ಟು ಧರ್ಮಗ್ರಂಥಗಳನ್ನು ರಚಿಸಲು ಅನುಕೂಲತೆಯನ್ನುಂಟು ಮಾಡಿರುವರು. ಹೊಯ್ಸಳ ಸಾಮ್ರಾಜ್ಯದ ಉಚ್ಛ್ರಾಯಸ್ಥಿತಿಗೆ ಜೈನ ಆಚಾರ್ಯರ ದೂರದರ್ಶಿತ್ವವೂ ವಿಚಾರ ಪರಿಣತಿಯೂ ಕಾರಣವೆಂದು ಹೇಳಬಹುದು. ಇವರ ರಾಜ್ಯಸ್ಥಾಪನೆಯ ಕಾರ್ಯದಲ್ಲಿ ಸುದತ್ತಾಚಾರ್ಯರ ಪಾತ್ರ ಗಣನೀಯವಾಗಿದೆ. ಹೊಯ್ಸಳ ದೊರೆಗಳನೇಕರು ಜೈನದೇವಾಲಯ ಮತ್ತು ಸಂಘಗಳಿಗೆ ಆಶ್ರಯದಾತರಾಗಿದ್ದು ಅವುಗಳ ಅಭಿವೃದ್ಧಿಗೆ ವಿಶೇಷ ಸಹಾಯ ಮಾಡಿದ್ದಾರೆ. ದಕ್ಷಿಣಭಾರತದಲ್ಲಿ ಕಂಡುಬರುವ ಜೈನದೇವಾಲಯಗಳೂ, ಚೈತ್ಯಗಳೂ, ತೀರ್ಥಂಕರ ಪ್ರತಿಮೆಗಳೂ, ಗುರುಗಳ ಸಮಾಧಿಗಳೂ (ನಿಸದಿ), ಶಾಸನಗಳೂ ಆ ಕಾಲದಲ್ಲಿ ಜೈನಧರ್ಮದ ಪ್ರಭಾವವನ್ನು ಹೊರಗೆಡಹುತ್ತದೆ. ಹೊಯ್ಸಳರ ಕಾಲ ಜೈನಧರ್ಮದ ಅತ್ಯುಚ್ಛ್ರಾಯ ಕಾಲ. ಹೊಯ್ಸಳರ ಜನ್ಮಸ್ಥಳ ಮೂಡಿಗೆರೆ ತಾಲ್ಲೋಕಿನಲ್ಲಿರುವ 'ಅಂಗಡಿ' ಎಂಬ ಸ್ಥಳ. ಇದಕ್ಕೆ 'ಸೊಸೆವೂರ' ಅಥವಾ 'ಶಶಕಪುರ' ಎಂದು ಹೆಸರು. ಅದು ಜೈನಧರ್ಮದ ಭದ್ರವಾದ ನೆಲೆ. ಈಗಲೂ ಆ ಪ್ರದೇಶದಲ್ಲಿ ಹೊಯ್ಸಳರ ಕುಲದೇವತೆಯಾದ ವಾಸಂತಿಕಾದೇವಿಯೆಂದು ಪ್ರಸಿದ್ಧವಾಗಿರುವ ಪದ್ಮಾವತಿಯ ದೇವಾಲಯವಿದೆ. ಹೊಯ್ಸಳರ ಮೂಲಪುರುಷನಾದ ಸಳನು ಕುಂದುಕುಂದಾನ್ವಯದ ನಂದಿ ಸಂಘಕ್ಕೆ ಸೇರಿದ ಸುದತ್ತ ಅಥವಾ ವರ್ಧಮಾನ ಮುನಿಯ ಶಿಷ್ಯ. ರಾಜ್ಯಸ್ಥಾಪನೆಯೂ ಅದರ ನಿರ್ವಹಣೆಯ ಕಾಲದಲ್ಲಿಯೂ ಸುದತ್ತಾಚಾರ್ಯರ ಪಾತ್ರ ವಿಶೇಷವಾಗಿತ್ತು. ಮುಂದಿನವುಗಳು ವಿನಯಾದಿತ್ಯ ಮತ್ತು ನೃಪಕಾಮರ ಕಾಲದಲ್ಲಿಯೂ ಅವರ ಮಾರ್ಗದರ್ಶನ ಪ್ರಧಾನವಾಗಿದ್ದಿತು. ಇವರೆಲ್ಲರೂ ಜೈನಧರ್ಮೀಯರು. ೨ನೆಯ ವಿನಯಾದಿತ್ಯನ ಗುರು ಶಾಂತಿದೇವರೆಂಬುವರು ೧೦೬೨ರಲ್ಲಿ ದಿವಂಗತರಾದರು. ವಿನಯಾದಿತ್ಯನು ಅನೇಕ ಕೆರೆಗಳನ್ನು ಕಟ್ಟಿಸಿ ಜೈನ ಚೈತ್ಯಾಲಯಗಳನ್ನು ನಿರ್ಮಿಸಿದನು. (ಎ. ಕ. ೬ ಪು. ೧೪೩). ಮುಂದೆ ಬಂದ ಎರೆಯಂಗನಿಗೆ ದೇಶಿಯಗಣದ ಗೋಪನಂದ್ಯಾಚಾರ್ಯರೆಂಬುವರು ಗುರುಗಳು. ಶ್ರವಣ ಬೆಳಗೊಳದ ಕತ್ತಲೆಯ ಬಸದಿಯಲ್ಲಿರುವ ಶಾಸನವು ಇವರು ಜೈನಧರ್ಮವನ್ನು ಪುನರುತ್ಥಾನಗೊಳಿಸಿದರೆಂದು ಹೇಳುತ್ತದೆ. (ಎ. ಕ. ೫. ಪು ೧೪೮) ೧ನೆಯ ವೀರಬಲ್ಲಾಳನು ಸಕಲವಿದ್ಯಾಪಾರಂಗತರೂ ಆಯುರ್ವೇದಾಚಾರ್ಯರೂ ಆದ ಚಾರುಕೀರ್ತಿಮುನಿಗಳ ಪ್ರಭಾವದಿಂದ ರೋಗ ವಿಮುಕ್ತನಾದನು. ಆ ವಂಶದ ಪ್ರಖ್ಯಾತ ರಾಜನಾದ ವಿಷ್ಣುವರ್ಧನನು ರಾಮಾನುಜರ ಪ್ರಭಾವಕ್ಕೆ ಒಳಗಾದರೂ, ಜೈನಧರ್ಮದ ಪೋಷಕನೇ ಆಗಿದ್ದನು. ಕ್ರಿ. ಶ. ೧೧೨೫ ರವರೆಗೆ ಅವನು ಶ್ರೀಪಾಲತ್ರೈವಿದ್ಯರಿಗೆ ಶಿಷ್ಯನಾಗಿದ್ದನು. ಈ ಆಚಾರ್ಯರು 'ಷಡ್ದರ್ಶನ ಷಣ್ಮುಖ', 'ವಾದೀಭಕೋಲಾಹಲ' ಎಂಬ ಬಿರುದನ್ನು ಪಡೆದಿದ್ದರು. ಭೈರವಸ್ಥಾನದ ಶಾಸನದಿಂದ ಈತನು ಜೈನಬಸದಿಯನ್ನು ಕಟ್ಟಿಸಿದನೆಂದೂ ಅವುಗಳ ಜೀರ್ಣೋದ್ಧಾರಕ್ಕಾಗಿಯೂ, ಜೈನ ಯತಿಗಳ ಆಹಾರದಾನಕ್ಕಾಗಿಯೂ ಏರ್ಪಾಟು ಮಾಡಿದ್ದಾನೆಂದೂ ತಿಳಿದುಬರುತ್ತದೆ. ೧೧೨೯ರ ಬೇಲೂರು ಶಾಸನದಿಂದ ಇವನು ಮಲ್ಲಿ ಜಿನಾಲಯಕ್ಕೆ ದತ್ತಿ ಬಿಟ್ಟಿರುವುದು ತಿಳಿದುಬರುತ್ತದೆ. ೧೧೩೩ ರಲ್ಲಿ ಈತನು ತನ್ನ ದಿಗ್ವಿಜಯದ ಜ್ಞಾಪಕಾರ್ಥವಾಗಿ ಪಾರ್ಶ್ವ ದೇವಾಲಯಕ್ಕೆ ಒಂದು ಗ್ರಾಮವನ್ನು ದಾನಮಾಡಿದುದಲ್ಲದೆ ತನ್ನ ಮಗನಿಗೆ ವಿಜಯ ನಾರಸಿಂಹನೆಂದು ನಾಮಕರಣ ಮಾಡಿದನು. ವಿಷ್ಣುವರ್ಧನನ ಮಹಾರಾಣಿ ಶಾಂತಲಾದೇವಿ ಜೈನಧರ್ಮದಲ್ಲಿ ಅಚಲವಾದ ಭಕ್ತಿಯುಳ್ಳವಳು. ಪ್ರಭಾಚಂದ್ರ ದೇವರು ಅವಳ ಗುರುಗಳು. ಸವತಿಗಂಧವಾರಣ ಬಸದಿಯನ್ನು ಕಟ್ಟಿಸಿದವಳವಳೇ. ವಿಷ್ಣುವರ್ಧನನ ಸೇನಾಪತಿಯಾದ ಗಂಗರಾಜನು ಹಿರಿಯಜೈನ. ಈತನು ಶ್ರವಣಬೆಳಗೊಳದ ಚಿಕ್ಕ ಬೆಟ್ಟದಲ್ಲಿಯೂ ಜಿನನಾಥಪುರದಲ್ಲಿಯೂ ಅನೇಕ ಜಿನಾಲಯಗಳನ್ನು ಕಟ್ಟಿಸಿದ್ದಾನೆ. ದೊಡ್ಡಬೆಟ್ಟದಲ್ಲಿ ಗೋಮಟೇಶ್ವರ ದೇವಾಲಯದ ಸುತ್ತಲಿನ ಪ್ರಾಕಾರದ ಗೋಡೆಗಳನ್ನು ಕಟ್ಟಿಸಿದವನಿವನೇ. ಅನೇಕ ಪ್ರಾಚೀನ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿದ್ದಾನೆ. ಸಂಘಸಂಸ್ಥೆಗಳಿಗೆ ಉದಾರವಾಗಿ ದಾನಮಾಡಿದ್ದಾನೆ. ಈತನ ಹೆಂಡತಿ ಲಕ್ಷ್ಮೀಮತಿ ಸಲ್ಲೇಖನದಿಂದ ಪ್ರಾಣ ಬಿಟ್ಟುದಕ್ಕೆ ಈತನು ಶಾಸನವನ್ನು ಹಾಕಿಸಿದ್ದಾನೆ. ವಿಷ್ಣುವರ್ಧನನ ಇತರ ಸೇನಾಪತಿಗಳಾದ ಬೊಪ್ಪ, ಪುಣಿಸ, ಮರಿಯಾನೆ ಮೊದಲಾದವರು ಜೈನ ಮತಕ್ಕೆ ತೋರಿಸಿದ ಭಕ್ತಿಶ್ರದ್ಧೆಗಳು ಅನೇಕ ಶಾಸನಗಳಲ್ಲಿ ಉಲ್ಲೇಖವಾಗಿವೆ. ಮುಂದೆ ಒಂದನೆಯ ನರಸಿಂಹನು ತನ್ನ ಸೇನಾನಿಗಳ ಮೂಲಕ ಜೈನಧರ್ಮಕ್ಕೆ ಸಹಾಯ ಮಾಡಿದ್ದಾನೆ. ಹುಳ್ಳನು ನರಸಿಂಹನ ಸೇನಾನಿಯೂ ಭಂಡಾರಿಯೂ ಆಗಿದ್ದನು. ೧೧೬೫ರಲ್ಲಿ ಇವನು ಹುಳ್ಳನು ಕಟ್ಟಿಸಿದ್ದ ಚತುರ್ವಿಂಶತಿ ತೀರ್ಥಂಕರರ ಬಸದಿಯನ್ನು ಸಂದರ್ಶಿಸಿ ಸಮ್ಯಕ್ತ್ವ ಚೂಡಾಮಣಿಯೆಂಬ ಹುಳ್ಳನ ಬಿರುದಿಗೆ ಹೊಂದುವಂತೆ ಆ ಬಸದಿಗೆ 'ಭವ್ಯಚೂಡಾಮಣಿ' ಎಂಬ ನಾಮಧೇಯವನ್ನಿಟ್ಟನು. ವೀರಬಲ್ಲಾಳನ ಗುರು ನಂದಿ ಸಂಘದ ವಾಸುಪೂಜ್ಯಯತಿಗಳು. ಇವರು ಹುಳ್ಳನ ಪ್ರಾರ್ಥನೆಯ ಪ್ರಕಾರ ಆತನು ಮಾಡಿದ್ದ ದತ್ತಿಗಳನ್ನೆಲ್ಲ ಸ್ವೀಕರಿಸಿದರು. ೧೧೭೬ರ ಒಂದು ಶಾಸನದಂತೆ ದೇವಿಸೆಟ್ಟಿ ಎಂಬ ವರ್ತಕನು ಆತನ ಗುರುಗಳಾದ ಬಾಲಚಂದ್ರ ಮುನಿಗಳ ಆದೇಶದಂತೆ ದೋರಸಮುದ್ರದಲ್ಲಿ ವೀರಬಲ್ಲಾಳ ಜಿನಾಲಯವನ್ನು ಕಟ್ಟಿಸಿದನು. ರಾಜರ ಔದಾರ್ಯದಿಂದ ರಾಜಧಾನಿಯಾದ ದೋರಸಮುದ್ರವೇ ಜೈನರ ಕೇಂದ್ರವಾಯಿತು. ಕ್ರಿ.ಶ. ೧೧೯೨ರಲ್ಲಿ ಶ್ರೀಪಾಲದೇವರ ಶಿಷ್ಯರಾದ ಮರಿಸೆಟ್ಟಿ, ಕಾಮಿಸೆಟ್ಟಿ, ಭಾರತಿಸೆಟ್ಟಿ, ರಾಜಸೆಟ್ಟಿ ಎಂಬುವರು ದೋರಸಮುದ್ರದಲ್ಲಿ 'ಅಭಿನವ ಶಾಂತಿನಾಥ ಜಿನಾಲಯ'ವನ್ನು ಕಟ್ಟಿಸಿದರು. ಮುಂದಿನ ಮೂರನೆಯ ನರಸಿಂಹನು ಬಸ್ತಿಹಳ್ಳಿಯ ಶಾಸನದಂತೆ ಬೊಪ್ಪ ಸೈನ್ಯಾಧಿಪತಿಯು ದೋರಸಮುದ್ರದಲ್ಲಿ ಕಟ್ಟಿಸಿದ ಪಾರ್ಶ್ವನಾಥ ಬಸದಿಯನ್ನು ಜೀರ್ಣೋದ್ಧಾರ ಮಾಡಿದನು. ಕವಿಚಕ್ರವರ್ತಿಯಾದ ಜನ್ನನು ಈತನ ಸೇನಾನಿಯೂ, ಮಂತ್ರಿಯೂ, ಆಸ್ಥಾನ ವಿದ್ವಾಂಸನೂ ಆಗಿದ್ದನು. ಜನ್ನನು ಹಳೆಯಬೀಡಿನಲ್ಲಿ ಪಾರ್ಶ್ವನಾಥ ದೇವಾಲಯದ ಮುಖಮಂಟಪವನ್ನು ಕಟ್ಟಿಸಿ ತನ್ನ 'ಅನಂತನಾಥ ಪುರಾಣ'ದ ಒಂದು ಸಹಸ್ರಪ್ರತಿಯನ್ನು ಬರೆಸಿ ವಿದ್ವಾಂಸರಿಗೆ ಗ್ರಂಥದಾನ ಮಾಡಿದನು. ಚಾಲಕರ ಗಣದ ಮೇಘಸಿದಾಂತಿ ದೇವರು ಜನ್ನನ ಗುರುಗಳು. ತ್ರಿಕೂಟ ರತ್ನ

(26ನೇ ಪುಟ ನೋಡಿ)

# ಶ್ರೀ ವೆಂಕಟೇಶ ಭುಜಂಗ ಪ್ರಯಾತ ಸ್ತೋತ್ರ

ಈ ಕೃತಿಯು ಕೆಳದಿ ಪ್ರಾಚ್ಯವಸ್ತು ಸಂಶೋಧನಾಲಯದಲ್ಲಿರುವ ತಾಳೆಯೋಲೆ ಹಸ್ತಪ್ರತಿಯ ಕಟ್ಟೊಂದರಲ್ಲಿ ಲಭಿಸಿದೆ. ಲಿಪಿಕಾರನ ಸಂಗತಿಯೂ ಹಾಗೂ ಕಾಲನಿರ್ದೇಶನಾದಿಗಳು ಕಂಡು ಬಾರದಿದ್ದರೂ ಇದೊಂದು ಅಪೂರ್ವ ಕೃತಿಯೆನಿಸಿದೆ. ಶ್ರೀ ಆದ್ಯ ಶಂಕರಾಚಾರ್ಯರ ಈ ಕೃತಿಯು ಈವರೆಗೂ ಉಪಲಬ್ಧವಾಗಿಲ್ಲದಿರುವುದು ವಿದ್ವಾಂಸರ ಕುತೂಹಲಕ್ಕೆ ಕಾರಣವಾಗಿದೆ. ಅನ್ಯತ್ರ ದೊರೆತಲ್ಲಿ ಪಾಠಾಂತರ ಪರಿಷ್ಕರಣಕ್ಕೆ ಮೂಲ ಸಾಮಾಗ್ರಿಗೆ ಸಾಧಕವಾಗುವುದರಿಂದ ಇದನ್ನು ಸಂಪಾದಿಸಲಾಗಿದೆ. ಕಟ್ಟಿನ ಮಧ್ಯೆ ಕೇವಲ ಎರಡೇ ಓಲೆಗಳಲ್ಲಿ ದೊರೆತ ತಾಳೆಗರಿಯ ಪ್ರಮಾಣ ಈ ರೀತಿ ಇವೆ. ಉ 14 ಸೆ.ಮಿ.+ಅ.5 ಸೆ.ಮಿ. ಪ್ರತಿಸಾಲಿನಲ್ಲಿ ಸರಿ ಸುಮಾರಾಗಿ 18 ಅಕ್ಷರಗಳಿದ್ದು 10 ಸಾಲುಗಳಿವೆ. ಕನ್ನಡ ಲಿಪಿಯಲ್ಲಿರುವ ಈ ಕೃತಿಯನ್ನು ಓದಲು ಸುಲಭಗ್ರಾಹ್ಯವಾಗಿದೆ. ರಾಗ ಸಂಯೋಜನಾಬದ್ಧವಾಗಿ ಹಾಗೂ ಸುಶ್ರಾವ್ಯವಾಗಿ ಭಗವಾನ್ ಶ್ರೀ ವೆಂಕಟರಮಣಸ್ವಾಮಿಯನ್ನು ಭಕ್ತಿಯಿಂದ ಪ್ರಾರ್ಥಿಸಲು ಯೋಗ್ಯವಾದ ಈ ರಚನೆಯು ಭಕ್ತರಿಗೆ ಒಂದು ವರದಾನವಾಗಿದೆ, ಸುಪ್ರಭಾತಕ್ಕೆ ಅಳವಡಿಸಲು ಎಲ್ಲ ರೀತಿಯಿಂದಲೂ ಸೂಕ್ತವಾದ ಈ ಕೃತಿಯು ಶ್ರೀ ಶಂಕರಾಚಾರ್ಯರಿಂದ ವಿರಚಿತವಾಗಿರುವುದು ಗಮನಾರ್ಹವಾದುದು.

ಸಂಪಾದಕರು : ಕೆಳದಿ ಗುಂಡಾಜೋಯಿಸ್ ಎಂ. ಎ;
ಪರಿಶೋಧಕರು : ಗುರುಪಾದ ಹೆಗಡೆ ಎಂ. ಎ;

ಶ್ರೀ ವೆಂಕಟೇಶ ಭುಜಂಗಯಾತ್ರ ಸ್ತೋತ್ರದ ತಾಳೆಯೋಲೆಯ ಚಿತ್ರ. ↓



ಮುಖೇ ಚಾರುಹಾಸಂ ಕರೇ ಶಂಖಚಕ್ರಂ
ಗಲೇ ರತ್ನಮಾಲಾಂ ಸ್ವಯಂ ಮೇಘವರ್ಣಮ್
ತಥಾ ದಿವ್ಯಶಸ್ತ್ರಂ ಪ್ರಿಯಂ ಪೀತವಸ್ತ್ರಂ
ಧರಂತಂ ಮುರಾರಿಂ ಭಜೇ ವೇಂಕಟೇಶಮ್ 1

ಸದಾಽಭೀತಿಹಸ್ತಂ ಮುದಾಜಾನುಪಾಣಿಂ
ಲಸನ್ಮೇಖಲಂ ರತ್ನಶೋಭಾ ಪ್ರಕಾಶಮ್
ಜಗತ್ಪಾದಪದ್ಮಂ ಮಹತ್ಪದ್ಮನಾಭಂ
ಧರತಂ ಮುರಾರಿಂ ಭಜೇ ವೇಂಕಟೇಶಮ್ 2

ಅಜಂ ನಿರ್ಮಲಂ ನಿತ್ಯಮಾಕಾಶರೂಪಂ
ಜಗತ್ಕಾರಣಂ ಸರ್ವವೇದಾಂತ ವೇದ್ಯಮ್
ವಿಭುಂ ತಾಪಸಂ ಸಚ್ಚಿದಾನಂದರೂಪಂ
ಧರಂತಂ ಮುರಾರಿಂ ಭಜೇ ವೇಂಕಟೇಶಮ್ 3

ಶ್ರಿಯಾವಿಷ್ಟಿತಂ ವಾಮವಕ್ಷಪ್ರಕಾಂತಂ
ಸುರೈರ್ವಂದಿತಂ ಬ್ರಹ್ಮರುದ್ರಸ್ತುತಂ ತಮ್
ಶಿವಂ ಶಂಕರಂ ಸ್ವಸ್ತಿನಿರ್ವಾಣರೂಪಂ
ಧರಂತಂ ಮುರಾರಿಂ ಭಜೇ ವೇಂಕಟೇಶಮ್ 4

ಮಹಾಯೋಗಸಾಧ್ಯಂ ಪರಿಭ್ರಾಜಮಾನಂ
ಚಿರಂ ವಿಶ್ವರೂಪಂ ಸುರೇಶಂ ಮಹೇಶಮ್
ಅಹೋ! ಶಾಂತರೂಪಂ ಸದಾ ಧ್ಯಾನಗಮ್ಯಂ
ಧರಂತಂ ಮುರಾರಿಂ ಭಜೇ ವೇಂಕಟೇಶಮ್

ಅಹೋ! ಮತ್ಸ್ಯರೂಪಂ ತಥಾ ಕೂರ್ಮರೂಪಂ
ಮಹಾ ಕ್ರೋಡರೂಪಂ ತಥಾ ನಾರಸಿಂಹಮ್
ಭಜೇ ಕುಬ್ಜರೂಪಂ ವಿಭುಂ ಜಾಮದಗ್ನ್ಯಂ
ಧರಂತಂ ಮುರಾರಿಂ ಭಜೇ ವೇಂಕಟೇಶಮ್ 6

ಅಹೋ ಬುದ್ಧರೂಪಂ ತಥಾ ಕಲ್ಕಿರೂಪಂ
ಪ್ರಭುಂ ಶಾಶ್ವತಂ ಲೋಕರಕ್ಷಾಮಹಂತಮ್
ಪೃಥಕ್ಕಾಲಲಬ್ಧಾತ್ಮಲೀಲಾವತಾರಂ
ಧರಂತಂ ಮುರಾರಿಂ ಭಜೇ ವೇಂಕಟೇಶಮ್ 7

ಇತಿ ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಶ್ರೀಮಚ್ಛಂಕರಾಚಾರ್ಯ ವಿರಚಿತಂ ವೇ ೦ ಕ ಟೇ ಶ್ವ ರ (ಭುಜಂಗ ಪ್ರಯಾತ) ಸ್ತೋತ್ರಮ್ ಸಂಪೂರ್ಣಂ.

# ಗೃಹಲಕ್ಷ್ಮಿ

# ಶ್ರೀ ಚಂದ್ರಲಾ ಪರಮೇಶ್ವರಿ

ಭಾರತ ವರ್ಷದ ಪ್ರತಿಯೊಂದು ಪ್ರಾಂತ್ಯದಲ್ಲಿ ಪುಣ್ಯನದಿಗಳು, ಪುಣ್ಯಕ್ಷೇತ್ರಗಳು ಉಂಟು. ಅಂತಹವುಗಳಲ್ಲಿ ಒಂದು ಪ್ರಸಿದ್ಧ ಕ್ಷೇತ್ರ ಶ್ರೀ ಚಂದ್ರಲಾ ಪರಮೇಶ್ವರಿಯ ವಾಸಸ್ಥಾನ. ಇದು ಕರ್ನಾಟಕದ ಗುಲ್ಬರ್ಗಾ ಜಿಲ್ಲೆಯ ಚಿತ್ರಪುರ ತಾಲ್ಲೂಕಿಗೆ ಸೇರಿದ 'ಸನ್ನತಿ' ಕ್ಷೇತ್ರದಲ್ಲಿದೆ. ಇಲ್ಲಿ ಕಾಗಿನಿ ಮತ್ತು ಭೀಮರತಿಯೆಂಬ ಎರಡು ಪುಣ್ಯನದಿಗಳ ಸಂಗಮದ ವಿಶೇಷ ಸನ್ನಿಧಾನವಿದೆ. ಈ ನದಿಯ ದಡದಮೇಲೆ ಬಹಳ ಎತ್ತರದಲ್ಲಿ ಈ ಗುಡಿ ನಿರ್ಮಾಣಗೊಂಡಿದೆ. ಕಟ್ಟಡವು ಬಹಳ ಪುರಾತನವಾದುದು. ಈ ದೇವಿಯ ಮಹಿಮೆಯು ಅಥರ್ವಣ ವೇದ, ಸ್ಕಂದಪುರಾಣ, ಹರಿವಂಶ, ಮತ್ಸ್ಯಪುರಾಣ, ಮಾರ್ಕಂಡೇಯ ಪುರಾಣಗಳಲ್ಲಿ ಉಕ್ತವಾಗಿದೆ. ಈ ಗುಡಿಯ ಸುತ್ತಲೂ ಪ್ರಕೃತಿ ಸೌಂದರ್ಯ ಚೇತೋಹಾರಿಯಾಗಿದೆ. ಗುಡಿಯ ಒಳಭಾಗದಲ್ಲಿ ಮಂಟಪಗಳಿವೆ. ಮಧ್ಯೆ ದೊಡ್ಡ ಅಂಗಳವಿದೆ. ಈ ಗುಡಿಯಲ್ಲಿ ಸುಮಾರು ಒಂದು ಸಾವಿರ ಜನರು ತಂಗಬಹುದು. ಈ ದೇವಿಯ ಉತ್ಸವವು ಪ್ರತಿ ಆಶ್ವೀಜ ಶುದ್ಧ ಪಾಡ್ಯದಿಂದ ನವಮಿವರೆಗೂ ವಿಶೇಷವಾಗಿ ನಡೆಯುವುದು. ಚೈತ್ರಶುದ್ಧ ಹುಣ್ಣಿಮೆಯಂದು ರಥೋತ್ಸವ ನಡೆದು ಆಗ ಅಸಂಖ್ಯ ಭಕ್ತರು ದೇವಿಯ ದರ್ಶನ ಪಡೆದು ತಮ್ಮ ಮನೋಭೀಷ್ಟಗಳನ್ನು ನೆರವೇರಿಸಿಕೊಳ್ಳುವರು. ರಥೋತ್ಸವ ಕಾಲದಲ್ಲಿ ಮುತ್ತೈದೆಯರು ಒಬ್ಬರಿಗೊಬ್ಬರು, ಹರಿದ್ರ-ಕುಂಕುಮ, ಮಂಗಳ ದ್ರವ್ಯಗಳನ್ನೂ, ಮರದ ಬಾಗಿನಗಳನ್ನೂ ಕೊಟ್ಟು ಕೊಳ್ಳುವರು. ದೇವಿಗೆ ಸೀರೆ, ಕುಪ್ಪುಸ, ಅರಿಸಿನ, ಕುಂಕುಮಗಳನ್ನು ಉಡಿ ತುಂಬುವರು.

ದೇವಿಯು ಗಜಲಕ್ಷ್ಮಿಯ ಆಕಾರದಲ್ಲಿ ಕುಳಿತಿರುವಳು. ಈ ವಿಗ್ರಹವು ಎರಡೂವರೆ ಅಡಿ ಎತ್ತರವಿರುವುದು. ವಿಗ್ರಹದ ಬಲಭಾಗದಲ್ಲಿ ಎರಡು ದೊಡ್ಡ ಪಾದಗಳಿವೆ. ಆ ಪಾದಗಳ ಮೇಲ್ಭಾಗದಲ್ಲಿ ಅಗಲವಾದ ತೂಬೊಂದಿದೆ. ಪ್ರತಿದಿವಸ ನಡೆಯುವ ಅಭಿಷೇಕದ ಜಲವು ದೊಡ್ಡ ಪ್ರಮಾಣದಲ್ಲಿದ್ದರೂ, ಒಂದು ತೊಟ್ಟು ನೀರೂ ಕಣ್ಣಿಗೆ ಕಾಣದೆ ಅಂತರ್ಭಾಗದಲ್ಲಿ ಮಾಯವಾಗುವುದು. ಆತೂಬಿನಲ್ಲಿ ಎಂದಾದರೊಮ್ಮೆ ನಂಬಿದ ಭಕ್ತರಿಗೆ ಭ್ರಮರಗಳ ಝೇಂಕಾರವು ಕೇಳಿಸುತ್ತದೆನ್ನುವರು. ಆ ಪಾದಗಳಿಗೆ ವಿಶೇಷ ಮಹಿಮೆಯುಂಟು. ಹರಕೆ ಹೊತ್ತ ಭಕ್ತರ ಅವಕ್ಕೆ ಬೆಳ್ಳಿಯಗೆಜ್ಜೆ, ಪಟ್ಟೆಗೊಲಸುಗಳನ್ನು ಏರಿಸುವರು. ಈ ದೇವಿಯ ಅರ್ಚಕರಿಗಾಗಿ ಅಲ್ಲಿಯೇ ಮನೆಯನ್ನು ಕಟ್ಟಿ ಕೊಟ್ಟಿರುವುದರಿಂದ ಭಕ್ತಾದಿಗಳು ಯಾವ ಹೊತ್ತಿನಲ್ಲಿ ಹೋದರೂ ದೇವಿಯ ಪೂಜೆ-ಪ್ರಸಾದಗಳು ದೊರಕುವುವು.

ಪ್ರತಿದಿನ ಬೆಳಗ್ಗೆ ಸುಪ್ರಭಾತ ಭಜನೆ ನಡೆಸುವರು. ಒಂಭತ್ತು ಗಂಟೆಗೆ ಕುಂಕುಮಾರ್ಚನೆ, ಪೂಜಾದಿಗಳು ನಡೆಯುವುವು. ಹನ್ನೆರಡು ಗಂಟೆಗೆ ನೈವೇದ್ಯ, ಮಹಾಮಂಗಳಾರತಿ ನಡೆಯುವುದು. ಮಧ್ಯಾಹ್ನ ಎರಡುಗಂಟೆಯವರೆಗೂ ಬಂದ ಭಕ್ತಾದಿಗಳಿಗೆ ಭೋಜನ. ಸಂಜೆ ಮತ್ತೆ ಭಜನೆ ಮಂಗಳಾರತಿಯಾಗುವುದು. ಆಗ ಮೋಕ್ಷವಾಗಿ ಪೂಜಾದಿಗಳನ್ನು ನಡೆಸುವರು. ಗುಡಿಯ ಒಳಭಾಗದಲ್ಲಿ ಗುಡಿಗೆ ಸಂಬಂಧಿಸಿದ ಆಫೀಸು, ಟ್ರಸ್ಟು ಮುಂತಾದವು ಇವೆ.

ಶ್ರೀಚಂದ್ರಲಾಂಬೆಯ ಚರಿತ್ರೆ ಪ್ರಾಚೀನವಾದುದು. ಈ ದೇವಿಯು ಚಾಲುಕ್ಯ ರಾಜರ ಕುಲದೇವಿಯಾಗಿದ್ದಳೆಂದು ಐತಿಹಾಸಿಕ ಉಲ್ಲೇಖವಿದೆ. ಇಂದಿಗೂ ಈಕೆ ಅನೇಕ ಕುಟುಂಬಗಳ ಕುಲದೇವಿಯಾಗಿದ್ದಾಳೆ. ಈಕೆ ಲಕ್ಷ್ಮೀ ಸಂಭೂತಳು. ಶ್ರೀ ಸೀತಾದೇವಿಯ ಪೂರ್ಣಾವತಾರಳು. ಭಗವಂತನ ದಶಾವತಾರಗಳಲ್ಲಿ ಒಂದಾದ ರಾಮಾವತಾರದಲ್ಲಿ ಸೇತುಬಂಧನ ಸಂದರ್ಭದಲ್ಲಿ ಸಮುದ್ರನಾಥನು ಹನುಮಂತನಿಗೆ ಸಹಾಯ ನೀಡಿದನು. ಅದರ ಸಲುವಾಗಿ ಬಹಳ ಅಹಂಕಾರಿಯಾಗಿದ್ದನು. ಸೀತಾರಾಮರ ಪಟ್ಟಾಭಿಷೇಕಕ್ಕಾಗಿ ಅವರ ಆಗಮನವನ್ನು ಕಾಯುತ್ತಿದ್ದ ಅಯೋಧ್ಯಾವಾಸಿಗಳು ಸೀತಾರಾಮರು ಬಂದ ಕೂಡಲೇ ಪಟ್ಟಾಭಿಷೇಕವನ್ನು ಏರ್ಪಡಿಸಿದರು. ಎಲ್ಲರಿಗೂ ಆಮಂತ್ರಣವಿತ್ತರು. ಸಮುದ್ರನಾಥನು ಅಹಂಕಾರದಿಂದ ಶ್ರೀರಾಮನ ಮಹಿಮೆಯನ್ನು ಮರೆತು ಕಟೂಕ್ತಿಗಳನ್ನಾಡಿದ ಪ್ರಯುಕ್ತ ಅವನಿಗೆ ಆಮಂತ್ರಣವನ್ನು ಕಳಿಸಲಿಲ್ಲ. ಇದರಿಂದ ಸಮುದ್ರನಾಥನು ಕೋಪದಿಂದ ಕಿಡಿಕಿಡಿಯಾದ. ಶಾಂತಮೂರ್ತಿಯಾದ ಶ್ರೀರಾಮಚಂದ್ರನು ಎಷ್ಟು ಸಮಾಧಾನ ಪಡಿಸಿದರೂ ಸುಮ್ಮನಾಗದೆ 'ಮತ್ತೆ ನೀನು ಇನ್ನೊಂದು ಜನ್ಮತಾಳಿ ಹೆಂಡತಿಯನ್ನು ಕಳೆದುಕೊಂಡು ಅಡವಿಯಲ್ಲಿ ಅಲೆದಾಡು' ಎಂದು ಶ್ರೀರಾಮನಿಗೇ ಶಾಪವನ್ನು ಕೊಟ್ಟು ಹೊರಟು ಹೋದನು. ಜಗನ್ನಾಟಕ ಸೂತ್ರಧಾರಿಯಾದ ಭಗವಂತನಿಗೆ ಎಲ್ಲಿಯಶಾಪ? ಕಲಿಯುಗದ ಆದಿಯಲ್ಲಿ ವಿಂಧ್ಯಾಚಲ ಪ್ರದೇಶವನ್ನು ಆಳುತ್ತಿದ್ದ ದೇವದತ್ತ ಎಂಬ ರಾಜನ ಮಗನಾಗಿ ಶ್ರೀರಾಮಚಂದ್ರನು ಅವತರಿಸಿದನು. ಅವನಿಗೆ ನಾರಾಯಣನೆಂದು ಹೆಸರಿಟ್ಟರು. ಈತನು ಬಾಲ್ಯದಿಂದಲೂ ವಿರಕ್ತನಾಗಿ, ರಾಜ್ಯಭಾರಗಳನ್ನು ತ್ಯಜಿಸಿ ನಾರದರ ಉಪದೇಶದಂತೆ ತಪಸ್ಸನ್ನಾಚರಿಸಿ ನಾರಾಯಣ ಮುನಿಯಾದನು. ರಾಜಸೇನನೆಂಬ ರಾಜನಿಗೆ ಸೀತಾದೇವಿ ಚಂದ್ರವದನೆಯೆಂಬ ಹೆಸರಿನಿಂದ ಜನಿಸಿದಳು. ದೇವೇಂದ್ರನ ಅಪ್ಪಣೆಯಂತೆ ಇಂದುಪತಿಯ ಮಗನಾಗಿ ಸೇತುರಾಜನೆಂಬ ಹೆಸರಿನಿಂದ ಸಮುದ್ರರಾಜನು ಜನಿಸಿದನು. ನಾರಾಯಣ ಮುನಿಗೆ ಮಗಳನ್ನು ಕೊಡು ಎಂದು ರಾಜಸೇನನಿಗೆ ಸ್ವಪ್ನವಾಗಿ ಸ್ವಯಂವರವನ್ನು ಏರ್ಪಡಿಸಿದನು. ನಿಯತ ಪತಿ, ಪತ್ನಿಯರಾದ ಕಾರಣ ನಾರಾಯಣ ಮುನಿ ಮತ್ತು ಚಂದ್ರಲಾಂಬೆ ದಂಪತಿಗಳಾದರು. ಭೀಮಾನದೀತೀರದಲ್ಲಿ ಒಂದು ಪರ್ಣಕುಟಿಯನ್ನು ಕಟ್ಟಿಕೊಂಡು ಈ ಯೋಗಿ ದಂಪತಿಗಳು ತಾಪಸ ಜೀವನವನ್ನು ನಡೆಸುತ್ತಿದ್ದರು. ಒಂದು ದಿನ ನಾರಾಯಣಮುನಿಯು ಇಲ್ಲದ ಸಮಯದಲ್ಲಿ ಸೇತುರಾಜನು ಬೇಟೆಯಾಡುತ್ತಾ ಈ ಕುಟೀರದ ಹತ್ತಿರ ಬಂದು ಚಂದ್ರವದನೆಯ ರೂಪ-ಲಾವಣ್ಯಗಳಿಗೆ ಮುಗ್ಧನಾಗಿ ಕಾಮಾತುರನಾದನು. ಆಗ ಅಬಲೆಯಾದ ಚಂದ್ರಲಾಂಬೆಯು, ಬೇರೆ ಮಾರ್ಗಕಾಣದೆ ಸೇತು ರಾಜನಿಗೆ ಹೀಗೆ ಹೇಳಿದಳು. 'ನಾನು ನಲವತ್ತು ದಿನಗಳು ಒಂದು ವ್ರತವನ್ನು ಆಚರಿಸುವೆನು. ವ್ರತನಿಯಮ ಮುಗಿಯುವವರೆಗೂ ಮಾತನಾಡುವುದಿಲ್ಲ' ಎಂದು ಕರಾರು ಮಾಡಿಕೊಂಡಳು. ಅದಕ್ಕೆ ಸೇತುರಾಜನು



ಶ್ರೀಮತಿ ದೊಡ್ಡಿ ಸುಧಾಬಾಯಿ

ಒಪ್ಪಿಕೊಂಡನು. ಅಲ್ಲಿಯೇ ಹತ್ತಿರವಿರುವ ಸೋಮೇಶ್ವರನ ಗುಡಿಯಲ್ಲಿ ಪತಿವ್ರತೆಯಾದ ಚಂದ್ರಲಾಂಬೆ ಪರಮಾತ್ಮನನ್ನು ಪ್ರಾರ್ಥಿಸುತ್ತಾ ಇದ್ದಳು. ಇತ್ತ ನಾರಾಯಣ ಮುನಿಯು ಯೋಗದೃಷ್ಟಿಯಿಂದ ಎಲ್ಲ ಅರಿತವನಾಗಿ ಮಾರ್ಗ ದರ್ಶನ ಮಾಡಬೇಕೆಂದು ತನ್ನ ಕುಲದೇವಿಯನ್ನು ಪ್ರಾರ್ಥಿಸಿದನು. ಆಕೆಯು ಕೊಟ್ಟ ಒಂದು ತೆಂಗಿನಕಾಯನ್ನು ತೆಗೆದುಕೊಂಡು ಹೋಗಿ ಸೇತುರಾಜನ ಬಳಿ ಎಸೆದನು. ಕಾಯಿಯ ಒಳಗಿನಿಂದ ಭ್ರಮರಗಳು ಝೇಂಕರಿಸುತ್ತ ಬಂದು ಸೇತುರಾಜನನ್ನು ಮುತ್ತಿದವು. ಉರಿಯನ್ನು ತಡೆಯಲಾರದೆ ಸೇತುರಾಜನು ಭೀಮರತಿನದಿಯಲ್ಲಿ ಬಿದ್ದು ಮೃತಪಟ್ಟನು.

ಆ ಸ್ಥಳದಲ್ಲಿ ದೇವಿಯ ಎರಡು ಪಾದಗಳು ಉದ್ಭವಿಸಿದುವು. ಆ ಪಾದಗಳಲ್ಲಿ ಭ್ರಮರಗಳು ಇದ್ದುವು. ಅಲ್ಲೇ ಭೀಮಾನದೀತೀರದಲ್ಲಿ ದೇವಿಯ ಉಪಾಸಕರು ದೊಡ್ಡಗುಡಿಯನ್ನು ನಿರ್ಮಾಣ ಮಾಡಿದರು. ಹೊನ್ನಗಂಟ ಪಿಂಗಳಾಂಬೆ, ಸನ್ನತಿ ಚಂದ್ರಲಾಂಬೆ, ಕೊಲ್ಹಾಪುರದ ಲಕ್ಷ್ಮೀದೇವಿ ಇವು ಮೂರು ಒಂದೇ ಲಕ್ಷ್ಮಿಯ ಅವತಾರವೆಂದು ಪುರಾಣ ಪ್ರಸಿದ್ಧವಾಗಿವೆ.

ಸನ್ನತಿ ಕ್ಷೇತ್ರದಲ್ಲಿರುವ ಚಂದ್ರಲಾಂಬೆಯ ದರ್ಶನಕ್ಕೆ ಹೋಗಲು ವಾಹನಗಳ ಸೌಕರ್ಯವಿದೆ. ವಾಡಿ–ರಾಯಚೂರು ಮಾರ್ಗ ಮಧ್ಯದಲ್ಲಿ 'ನಾಲ್ವಾರ್' ಎಂಬ ರೈಲ್ವೆ ನಿಲ್ದಾಣದಲ್ಲಿಳಿದು ಹನ್ನೆರಡು ಮೈಲು ಬಸ್ಸಿನಲ್ಲಿ ಹೋಗಬೇಕು. ಉತ್ಸವ ಸಮಯದಲ್ಲಿ ವಿಶೇಷ ಬಸ್ಸುಗಳು ಓಡಾಡುವುವು. ದೇವಿಯ ಗುಡಿಯು ಸನ್ನತಿ ಗ್ರಾಮಕ್ಕೆ ಆರು ಫರ್ಲಾಂಗು ದೂರದಲ್ಲಿದೆ. ಈ ದೇವಿಯ ಉತ್ಸವ ಸಮಯದಲ್ಲಿ ಹರಿಕಥೆ, ಪುರಾಣ ಪ್ರವಚನ, ಭಜನೆ ಇತ್ಯಾದಿಗಳು ನಡೆಯುವುವು. ಈ ದೇವಿಯ ಪಾದುಕೆಗಳನ್ನು ಹೊತ್ತು ನಿಂತಿರುವ ಭೀಮರತಿಯು ಪರಮಪಾವನಳು. ತಿರುಮಲೆಯಲ್ಲಿ 35 ವರ್ಷಗಳ ಕಾಲ ಶ್ರೀ ವೇಂಕಟೇಶ್ವರನ ಸೇವಾ ತಪಸ್ಸನ್ನಾಚರಿಸಿ ಅವನ ಪರಮಾನುಗ್ರಹಕ್ಕೆ ಪಾತ್ರರಾದ, ಅಪರೋಕ್ಷಜ್ಞಾನಿಗಳಾದ ಶ್ರೀಪಾಂಡುರಂಗೀ ಹುಚ್ಚಾಚಾರ್ಯರು 'ಇಂದಿರೇಶ' ಎಂಬ ಮುದ್ರಿಕೆಯಿಂದ ಈ ದೇವಿಯ ಮೇಲೆ ಪದವನ್ನು ಮಾಡಿರುವರು. ಲಿಂಗಸೂಗೂರು ಗುರು ಪ್ರಾಣೇಶದಾಸರು ಈ ದೇವಿಯ ಮಹಿಮೆಯನ್ನು ಹಾಡಿ ಕೊಂಡಾಡಿದ್ದಾರೆ. ಶ್ರೀ ಕುಂದಾಪುರ ವ್ಯಾಸರಾಯ ಮಠದ ಶ್ರೀ ಲಕ್ಷ್ಮೀಶ ತೀರ್ಥ ಶ್ರೀಪಾದಂಗಳವರು ತಮ್ಮ ಸ್ವಹಸ್ತದಿಂದ ದೇವಿಗೆ ಕುಂಕುಮಾರ್ಚನೆ ಮಾಡಿದ್ದಾರೆ. ಭಕ್ತಾದಿಗಳಿಗೆ ಕುಲದೇವಿಯಾಗಿ ಅವರವರ ಮನೋಭೀಷ್ಟಗಳನ್ನು ನೆರವೇರಿಸುವ ಶ್ರೀ ಚಂದ್ರಲಾಂಬೆಯ ಮಹಿಮೆ ಅಗಮ್ಯವಾದುದು.

# ಗುರು ಶಿಷ್ಯ ಸಂಬಂಧ

ಸಕಲ ಜೀವರಾಶಿಗಳಿಗೂ ಆಹಾರ, ನಿದ್ರೆ, ಭಯ, ಮತ್ತು ಮೈಥುನ ಇವು ಸಮಾನ ವಿಷಯಗಳು. ಎಲ್ಲ ಜೀವಿಗಳೂ ತಮ್ಮ ಶರೀರಪೋಷಣೆಗಾಗಿ ಆಹಾರ ಹುಡುಕಿಕೊಂಡು ಹೋಗುತ್ತವೆ, ಸಂಪಾದಿಸುತ್ತವೆ ಮತ್ತು ಶರೀರವನ್ನು ಪೋಷಿಸಿಕೊಳ್ಳುತ್ತವೆ. ಆಹಾರ ತಿಂದು ಸಂತೃಪ್ತಿಯಿಂದ ಸುಖನಿದ್ರೆಯನ್ನು ಬಯಸಿ ಚೆನ್ನಾಗಿ ನಿದ್ರಿಸುತ್ತವೆ. ನಿದ್ರೆ ಬಾರದಿದ್ದರೆ ಹಿಂಸೆಯಿಂದ ಒದ್ದಾಡುತ್ತವೆ. ನಿದ್ರೆಗಾಗಿ ಶ್ರಮಿಸುತ್ತವೆ. ಆಹಾರ ಸಂಪಾದಿಸುವಾಗಲಾಗಲೀ, ನಿದ್ರೆಮಾಡುವಾಗಲಾಗಲೀ ಬರಬಹುದಾದ ಶತ್ರುಗಳನ್ನು ನೆನೆದೋ, ಕಂಡೋ ಭಯಪಡುತ್ತವೆ. ಆಹಾರದಿಂದಲೂ, ನಿದ್ರೆಯಿಂದಲೂ ತೃಪ್ತಿಹೊಂದಿ ಭಯರಹಿತವಾಗಿರುವಾಗ ಅವಕ್ಕೆಲ್ಲಾ ತಮ್ಮ ಜೊತೆಗಾರರನ್ನು ಹುಡುಕುವುದು ಸಹಜ ಪ್ರೇರಣೆ. ಜೊತೆಗಾರ ಸಿಕ್ಕಿದಾಗ ಆನಂದದಿಂದ ನಲಿಯುತ್ತಾ ಪರಸ್ಪರ ಪ್ರೀತಿಯಿಂದಿದ್ದು ಮುಂದೆ ಸಂತಾನವೃದ್ಧಿ ಮಾಡುತ್ತವೆ. ಇದು ಸಕಲಜನ ವಿದಿತ ವಿಷಯ.

ಪಶುಪಕ್ಷಿ ಮೃಗಾದಿ ಸಕಲ ಜೀವಿಗಳಿಗೂ ಆಹಾರ ಸಂಪಾದಿಸಲು, ನಿದ್ರೆಹೋಗಲು, ಭಯ ನಿವೃತ್ತಿಗೆ ಉಪಾಯ ಹುಡುಕಲು ಜೊತೆಗಾರರ ಸಹವಾಸ ಹೊಂದಿ ಸುಖವಾಗಿರಲು ಸಾಕಷ್ಟು ಬುದ್ಧಿ ಶಕ್ತಿ ಇರುತ್ತದೆ. ಆದರೆ ಅವುಗಳಿಗೆ ತಮ್ಮ ಸೃಷ್ಟಿಯ ವಿಷಯವಾಗಲೀ, ಜಗತ್ಸೃಷ್ಟಿ ವಿಷಯವಾಗಲೀ, ಜಗತ್ತಿಗೆ ಕಾರಣವಸ್ತುವನ್ನು ಕುರಿತಾಗಲೀ ಚಿಂತನ ಮಾಡುವಷ್ಟು ಬುದ್ಧಿ ಇರುವುದಿಲ್ಲ. ಈ ವಿಷಯದಲ್ಲಿ ಮಾನವ ಮುಂದುವರಿದಿದ್ದಾನೆ. ವಿಚಾರವಾದಿಯಾಗಿದ್ದಾನೆ. ಹೆಚ್ಚು ಹೆಚ್ಚು ವಿಷಯಗಳನ್ನು ತಿಳಿಯುವ ಜಿಜ್ಞಾಸುವಾಗಿದ್ದಾನೆ. ಅವನಿಗೆ ದಿನನಿತ್ಯ ವ್ಯವಹಾರಗಳಲ್ಲಿ ತನ್ನನ್ನು ಮಿಂಚಿದ ಶಕ್ತಿ ಒಂದಿದೆ ಎಂಬ ಅನುಭವ ಅನೇಕ ಸಲ ಬರುತ್ತಲೇ ಇರುತ್ತದೆ. ತನಗೆ ಹುಟ್ಟಿದಾಗಿನಿಂದಲೂ ಇರುವ ಕಿವಿ ಮೂಗು ಕಣ್ಣು ಇತ್ಯಾದಿಗಳೊಡಗೂಡಿದ ದೇಹ, ಚಿಕ್ಕದಾಗಿದ್ದು, ಬೆಳೆದು ಪ್ರೌಢವಾಗಿ, ಪುನಃ ಕಾಲಕ್ರಮದಲ್ಲಿ ಅವೆಲ್ಲರ ಶಕ್ತಿ ಕುಗ್ಗಿ ಬಾಗಿ ಬಾಡಿದ ಶರೀರ ಒಂದುದಿನ ಹೇಳದೇ ಕೇಳದೇ ಉರುಳಿಹೋಗುವುದೆಂಬುದನ್ನೂ ತಿಳಿಯುತ್ತಾನೆ. ದಿನನಿತ್ಯ ಅಂತಹ ಅನೇಕ ಪ್ರಕರಣಗಳನ್ನು ಕಣ್ಣಾರೆ ಕಾಣುತ್ತಾನೆ. ದೇಹದ ಅಂಗಾಂಗಗಳೆಲ್ಲವೂ ಚೆನ್ನಾಗಿಯೇ ಇದ್ದರೂ ಅವನಲ್ಲಿದ್ದ ಪ್ರಾಣವಾಯು ಹಾರಿಹೋದಾಗ 'ಅವನು ಸತ್ತಿದ್ದಾನೆ' 'ಅವಳು ಇನ್ನಿಲ್ಲ' ಎನ್ನುತ್ತಾರೆ. ಹಾಗೆ ಇದುವರೆಗೂ ಈ ದೇಹದಲ್ಲಿದ್ದ ಸತ್ತ್ವಯಾವುದು? ಅದು ಯಾವರೂಪದಲ್ಲಿದ್ದಿತು? ಹೃದಯದಲ್ಲೇ? ಅಥವಾ ಶರೀರದ ಇನ್ಯಾವಭಾಗದಲ್ಲಿದ್ದಿತು? ಅಥವಾ ಶರೀರದಲ್ಲೆಲ್ಲಾ ವ್ಯಾಪ್ತವಾಗಿದ್ದಿತೇ ಎಂದು ತಿಳಿಯಲು ಜಿಜ್ಞಾಸೆ ಹುಟ್ಟಿದಾಗ, ಪ್ರಪಂಚದಲ್ಲೆಲ್ಲಾ ಅಲ್ಪ, ಅಸ್ಥಿರ, ಇಂದಿದ್ದೂ ನಾಳೆ ಇಲ್ಲವಾಗುವ ಅಶಾಶ್ವತ ವಸ್ತುಗಳೆಂದು ಬುದ್ಧಿಗೋಚರವಾದಾಗ, ತತ್ತ್ವಜ್ಞಾನಾಪೇಕ್ಷಿಯಾದವನು ಹೆಚ್ಚು ಹೆಚ್ಚು ತಿಳಿಯಲು ಕಾತುರನಾಗುತ್ತಾನೆ. ಅಂತಹ ಸಂದರ್ಭದಲ್ಲಿ ಭಗವಂತನ ನಿರ್ಹೇತುಕ ಕಟಾಕ್ಷದಿಂದಲೇ ಚೇತನರಿಗೆ ಆಚಾರ್ಯ ಪ್ರಾಪ್ತಿ ಉಂಟಾಗುವುದು. ಆ ಆಚಾರ್ಯರು ಭಗವಂತನಿಗೂ ಚೇತನರಿಗೂ ಇರುವ ಸಂಬಂಧ ಜ್ಞಾನವನ್ನು ತಿಳಿಸಿ ಮೋಕ್ಷಪ್ರಾಪ್ತಿಗೆ ಸಹಾಯಮಾಡುತ್ತಾನೆ.

ಶ್ರುತಿಯು 'ಆಚಾರ್ಯವಾನ್ ಪುರುಷೋ ವೇದ' ಎಂದೂ, ದಿವ್ಯ ಪ್ರಬಂಧಗಳು 'ಪಿರಂಗಿರುಳ್ ನೀಂಗ', 'ಜ್ಞಾನಚ್ಚುಡರ್ ವಿಳಕ್ಕೇತ್ತಿನೇನ್' 'ನಂದಾವಿಳಕ್ಕು', 'ವೇದಾಂತ ವಿಳಪ್ಪೊರುಳಿನ್ ಮೇಲಿರುಂದ ವಿಳಕ್ಕೈ' ಎಂಬಂತೆ ಅಜ್ಞಾನಾಂಧಕಾರವನ್ನು ಹೋಗಲಾಡಿಸಲು ಜ್ಞಾನದೀಪವನ್ನು ಹೊತ್ತಿಸುವ ಆಚಾರ್ಯರನ್ನಾಶ್ರಯಿಸಬೇಕೆನ್ನುತ್ತವೆ. ಛಾಂದೋಗ್ಯೋಪನಿಷತ್ತು 'ಆಚಾರ್ಯಸ್ತು ತೇಗತಿಂವಕ್ತಾ ಆಚಾರ್ಯಾದ್ಧ್ಯೈವ ವಿದ್ಯಾವಿದಿತಾ ಸಾ ದಿಷ್ಟಂ ಪ್ರಾಪಯತಿ' ಎಂದು ಆಚಾರ್ಯನೇ ಗತಿಯಾಗಿ, ತತ್ತ್ವವನ್ನು ತಿಳಿಸುವವನಾಗಿ, ವಿದ್ಯೆಯ ಸಾಕ್ಷಾತ್ಸ್ವರೂಪ ತಿಳಿಸುವವನಾಗಿದ್ದಾನೆಂದು ಘೋಷಿಸುತ್ತದೆ. ಶ್ವೇತಾಶ್ವತರೋಪನಿಷತ್ತಿನಲ್ಲಿ 'ಯಸ್ಯ ದೇವೇ ಪರಾ ಭಕ್ತಿಃ ಯಥಾದೇವೇ ತಥಾಗುರೌ' ಎಂದು ದೇವರಲ್ಲಿಟ್ಟಿರುವಷ್ಟೇ ಭಕ್ತಿಯನ್ನು ಆಚಾರ್ಯರಲ್ಲಿಯೂ ಇಡಬೇಕೆಂದೂ, ಕೈವಲ್ಯೋಪನಿಷತ್ತಿನಲ್ಲಿ 'ಅಂತ್ಯಾಶ್ರಮಸ್ಥಃ ಸ್ವಗುರುಂ ಪ್ರಣಮ್ಯ' ಎಂದೂ, ಶ್ರುತಿಗಳಲ್ಲಿ 'ಆಚಾರ್ಯವಾನ್ ಪುರುಷೋ ವೇದ' ಎಂದೂ, ತೈತ್ತಿರಿಯೋಪನಿಷತ್ತಿನಲ್ಲಿ 'ಆಚಾರ್ಯದೇವೋಭವ' ಎಂದೂ 'ದೇವಮಿವ ಆಚಾರ್ಯ ಮುಪಾಸೀತ' ಎಂದೂ, ಇತಿಹಾಸಪುರಾಣಗಳಲ್ಲಿ 'ಮಂತ್ರೇ ತದ್ದೇವತಾಯಾಂ ಚ ತಥಾ ಮಂತ್ರಪ್ರದೇ ಗುರೌ' ಎಂದೂ, 'ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್ ಆಚಾರ್ಯವತ್ತಯಾ ಮುಕ್ತಃ ತಸ್ಮಾದಾಚಾರ್ಯವಾನ್ ಭವೇತ್' ಎಂದೂ ಆಚಾರ್ಯರನ್ನೂ, ಅವರ ಮಹಿಮೆಯನ್ನೂ ವರ್ಣಿಸುತ್ತಿವೆ. ಗೀತಾಚಾರ್ಯನಾದ ಶ್ರೀಕೃಷ್ಣನೂ, ತತ್ತ್ವಬೋಧಾಭಿಲಾಷಿಯಾದವನು ಆಚಾರ್ಯರನ್ನಾಶ್ರಯಿಸಿ ಬ್ರಹ್ಮಜ್ಞಾನ ಪಡೆಯಬೇಕೆಂದು

**ಶ್ರೀ ವಿ.ಎಸ್. ರಾಮಾನುಜಾಚಾರ್ಯ**



ವೇದೋಪದೇಶ

# ತಿರುಮಲೆ ತಿರುಪತಿ ದೇವಸ್ಥಾನಗಳು

# ದಾನಯೋಜನೆಯಲ್ಲಿ

# ಯಾತ್ರಿಕ ವಸತಿ ಗೃಹಗಳು

ತಿರುಮಲೆಯಲ್ಲಿ ನಿರಂತರ ಹೆಚ್ಚುತ್ತಿರುವ ಯಾತ್ರಿಕರ ಅನುಕೂಲಗಳಿಗಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತವು ಹೆಚ್ಚಿನ ವಸತಿ ಸೌಕರ್ಯವನ್ನು ಒದಗಿಸಲು ತೀರ್ಮಾನಿಸಿದೆ. ಈ ಬೃಹತ್ ಕಾರ್ಯವನ್ನು ಭಕ್ತರ ಹಾಗೂ ಸೇವಾಕರ್ತರ ಸಕ್ರಿಯ ಸಹಕಾರದಿಂದ ನೆರವೇರಿಸಲು ತಿ.ತಿ.ದೇ. ನಿರ್ಧರಿಸಿದೆ

ಈ ಯೋಜನೆಯ ವಿವರಗಳನ್ನು ಆಸಕ್ತರಿಗಾಗಿ ಈ ಕೆಳಗಿನಂತೆ ನಿರೂಪಿಸಲಾಗಿದೆ.

## ಗರುಡಾದ್ರಿನಗರ ವಸತಿಯೋಜನೆ

ಈ ಯೋಜನೆಯನ್ವಯ ಎರಡು ಅಂತಸ್ತುಗಳ 16 ವಸತಿಗೃಹಗಳನ್ನು (ಪ್ರತಿಯೊಂದು ಅಂತಸ್ತಿನಲ್ಲಿ 4 ಸೂಟ್‌ಗಳಿರುವಂತೆ) ನಿರ್ಮಿಸಲಾಗುವುದು. ಪ್ರತಿಯೊಂದು ಸೂಟ್ ಸಹ 10' x 12' ಗಳಿದ್ದು ಸ್ನಾನ ಶೌಚಾಗಾರಗಳೊಂದಿಗೆ ಹಾಗೂ ಸಾಮಾನ್ಯ ಅಂಗಳದೊಂದಿಗೆ ಕೂಡಿರುವುದು.

ಒಟ್ಟು 320 ಚದರಡಿ ಪ್ಲಿಂತ್ ವಿಸ್ತೀರ್ಣದ ಪ್ರತಿಸೂಟ್‌ಗಾಗಿ ದಾನ ನೀಡಬೇಕಾದ ಮೊಬಲಗು ರೂ 30,000 ಮಾತ್ರ.

ಒಟ್ಟು 128 ಸೂಟ್‌ಗಳಿರುವ ಈ ಯೋಜನೆಯಲ್ಲಿ ಆಸಕ್ತ ಭಕ್ತರು ಈಗಾಗಲೇ 66 ಸೂಟ್‌ಗಳಿಗಾಗಿ ದಾನಗಳನ್ನು ನೀಡಿದ್ದಾರೆ!

8 ಸೂಟ್‌ಗಳ ಒಂದು ವಸತಿಗೃಹದ ವೆಚ್ಚವಾದ 2.4 ಲಕ್ಷ ರೂಗಳನ್ನಾಗಲೀ, 4 ಸೂಟ್‌ಗಳ ವೆಚ್ಚವಾದ 1.2 ಲಕ್ಷ ರೂಗಳನ್ನಾಗಲೀ ಅಥವಾ ಎರಡು ಸೂಟ್‌ಗಳ ವೆಚ್ಚವಾದ ರೂ 60,000 ಗಳನ್ನಾಗಲೀ ನೀವು ದಾನ ನೀಡಬಹುದು.

## ರಾಮಬಗೀಚಾ ಅತಿಥಿಗೃಹ ಯೋಜನೆ

ತಿರುಮಲೆಯ ದೇವಾಲಯದ ಈಶಾನ್ಯ ಭಾಗದಲ್ಲಿನ ರಾಮ ಬಗೀಚಾದಲ್ಲಿ ಮೂರು ಅತಿಥಿ ಗೃಹಗಳನು ನಿರ್ಮಿಸಲು ತೀರ್ಮಾನಿಸಲಾಗಿದೆ.

ಪ್ರತಿಯೊಂದು ಅತಿಥಿಗೃಹವೂ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಅಂತಸ್ತಿನಲ್ಲಿ 50 ಸೂಟ್‌ಗಳಿರುತ್ತವೆ. ಪ್ರತಿಯೊಂದು ಸೂಟ್ 14' x 16' ವಿಸ್ತೀರ್ಣವಿದ್ದು ಸ್ನಾನ ಶೌಚ ಗೃಹಗಳು ಇರುತ್ತವೆ. ಪ್ಲಿಂತ್ ವಿಸ್ತೀರ್ಣ ಸುಮಾರು 600 ಚ. ಅಡಿಗಳಾಗಿದ್ದು ಸಾಮಾನ್ಯ ಅಂಗಳವಿರುವುದು. ಪ್ರತಿ ಸೂಟ್‌ನ ನಿರ್ಮಾಣಕ್ಕೆ ತಗಲುವ ದಾನದ ಮೊಬಲಗು ರೂ 60,000 ಮಾತ್ರ.

ತೀರ್ಮಾನಿಸಲಾದ 450 ಸೂಟ್‌ಗಳಲ್ಲಿ ಈಗಾಗಲೇ 37 ಸೂಟ್‌ಗಳಿಗಾಗಿ ದಾನಗಳನ್ನು ಸ್ವೀಕರಿಸಲಾಗಿದೆ!

## ನಿಮ್ಮ ದಾನದ ಪ್ರತಿಯಾಗಿ ದೊರೆಯುವ ಸೌಲಭ್ಯಗಳು ಈ ರೀತಿ ಇವೆ

1. ದಾನಿಗಳ ಹೆಸರಿನ ಫಲಕವನ್ನು ಕಟ್ಟಡದಲ್ಲಿ ಸ್ಥಾಪಿಸಲಾಗುವುದು
2. ಒಂದು ಬಾರಿಗೆ ಹತ್ತು ದಿನಗಳಿಗೆ ಮೀರದಂತೆ ದಾನಿಯು ಒಂದು ವರ್ಷದಲ್ಲಿ 60 ದಿನಗಳ ಕಾಲ ಉಚಿತವಾಗಿ ತಮ್ಮ ದಾನದ ಕಟ್ಟಡದಲ್ಲಿ ತಂಗಬಹುದು.
3. ದಾನಿಯ ಬಂಧುಗಳಿಗೆ ತಿರುಮಲೆಯಲ್ಲಿ ವಸತಿ ನೀಡುವಲ್ಲಿ ಆದ್ಯತೆ ನೀಡಲಾಗುವುದು.
4. ಅಪೇಕ್ಷಿಸಿದಾಗ ದಾನಿಯ ಕಟ್ಟಡ ಖಾಲಿಯಿಲ್ಲದಲ್ಲಿ ಇತರ ಏರ್ಪಾಡುಗಳನ್ನು ಮಾಡಿಕೊಡಲಾಗುವುದು.

ಕೂಡಲೇ ಬರೆಯಿರಿ – ಕಾರ್ಯನಿರ್ವಹಣಾಧಿಕಾರಿ

ತಿ. ತಿ. ದೇ. ತಿರುಪತಿ

ತದ್ವಿದ್ಧಿ ಪ್ರಣಿಪಾತೇನ' ಎಂಬ ಶ್ಲೋಕದಲ್ಲಿ ವ್ಯಕ್ತವಾಗಿ ಹೇಳುತ್ತಾನೆ. ನಿಗಮಾಂತದೇಶಿಕರಾದರೋ 'ಆಚಾರ್ಯಾದಿಹ ದೇವತಾಂ ಸಮಧಿಕಾ ಮನ್ಯಾಂ ನ ಮನ್ಯಾಮಹೇ' ಎಂದು ದೇವರಿಗಿಂತಲೂ ಆಚಾರ್ಯರೇ ಹೆಚ್ಚು ಮಾನ್ಯರು' ಎನ್ನುತ್ತಾರೆ.

ಬ್ರಹ್ಮಜ್ಞಾನಿಯಾದ ಆಚಾರ್ಯರನ್ನೇ ಆಶ್ರಯಿಸಬೇಕಲ್ಲದೇ ಅನ್ಯ ವಿದ್ಯೆಗಳನ್ನು ತಿಳಿಸುವ ಆಚಾರ್ಯರನ್ನಲ್ಲ. ಏಕೆಂದರೆ ವಿಷ್ಣುಪುರಾಣದಲ್ಲಿ 'ತದ್ಜ್ಞಾನಮಜ್ಞಾನ ಮತೋಽನ್ಯದುಕ್ತಂ' ಎಂದು ಬ್ರಹ್ಮವಿದ್ಯಾಪ್ರತಿಪಾದಕವಲ್ಲದ ಮಿಕ್ಕ ವಿದ್ಯೆಗಳೆಲ್ಲಾ ಅಜ್ಞಾನಗಳೆಂದೇ ಘೋಷಿಸಿದೆ, ಮತ್ತು 'ತತ್ಕರ್ಮ ಯನ್ನ ಬಂಧಾಯ, ಸಾ ವಿದ್ಯಾ ಯಾ ವಿಮುಕ್ತಯೇ' ಎಂದು ಮೋಕ್ಷ ವಿದ್ಯೆಯೇ ವಿದ್ಯೆ ಎಂದೂ 'ವಿದ್ಯಾನ್ಯಾ ಶಿಲ್ಪ ನೈಪುಣ್ಯಂ' ಎಂದು ಅನ್ಯ ವಿದ್ಯೆಗಳ ಅಸಾರ್ಥಕತೆಯನ್ನು ವ್ಯಕ್ತಪಡಿಸಿದ್ದಾರೆ. ಶಾಸ್ತ್ರಗಳಾದರೋ ಅಪಾರ. ತಿಳಿದುಕೊಳ್ಳುವ ವಿಷಯಗಳು ಬಹಳವಾಗಿವೆ. ಚೇತನರ ಆಯುಸ್ಸು ಅಲ್ಪ, ಆದರಲ್ಲೂ ಬಹುವಿಘ್ನಗಳು ಬರುತ್ತಲೇ ಇರುತ್ತವೆ. ಆದುದರಿಂದ 'ಅಸಾರಂ, ಅಲ್ಪಸಾರಂ ಚ, ಸಾರಂ, ಸಾರತರಂ ತ್ಯಜೇತ್। ಭಜೇತ್ ಸಾರತಮಂ ಶಾಸ್ತ್ರಂ' ಎಂದುಕ್ತವಾದಂತೆ, ತಿರುಳಿಲ್ಲದ ಅಂದರೆ ಪ್ರಯೋಜನವಲ್ಲದ, ಅಲ್ಪತಿರುಳಿನ, ಸ್ವಲ್ಪ ಹೆಚ್ಚು ತಿರುಳಿನ ಶಾಸ್ತ್ರಗಳನ್ನೆಲ್ಲಾ ತ್ಯಜಿಸಿ ಸಾರತಮವಾದ ಶಾಸ್ತ್ರಗಳನ್ನು ತಿಳಿಯಬೇಕು. ಏಕೆಂದರೆ 'ಶಾಸ್ತ್ರಜ್ಞಾನಂ ಬಹುಕ್ಲೇಶಂ ಬುದ್ಧೇಃ ಚಲನ ಕಾರಣಂ' ಎಂದು ಶಾಸ್ತ್ರಜ್ಞಾನವು ಕ್ಲೇಶಕರವಾಗಿ ಬುದ್ಧಿ ಚಂಚಲತೆಗೆ ಕಾರಣವಾಗುವುದರಿಂದ, ಯಾವ ಶಾಸ್ತ್ರವನ್ನು ತಿಳಿದರೆ ಎಲ್ಲವಿಷಯಗಳೂ ತಿಳಿಯುವಂತೆ ಆಗುವುದೋ, ಯಾವುದು ನಮ್ಮ ಬಂಧನವನ್ನು ಬಿಡಿಸಿ ಮೋಕ್ಷಕ್ಕೆ ಸಾಧಕವಾಗ ಬಲ್ಲುದೋ ಅಂತಹದನ್ನು ಮಾತ್ರ ಕಲಿಯಲು, ಅಂತಹ ಜ್ಞಾನ ನಿಪುಣರಾದ ಆಚಾರ್ಯರನ್ನೇ ಆಶ್ರಯಿಸಬೇಕು. ತಾನು ಸೇವಿಸುವ ಆಚಾರ್ಯನು ಸಕಲ ಶಾಸ್ತ್ರಗಳನ್ನು ಕಲಿತು, ಸಾರತಮವಾದ ಶಾಸ್ತ್ರವನ್ನಾರಿಸಿ ಹೇಳುವಂತಹವನಿರಬೇಕು. ಜ್ಞಾನ ಭಕ್ತಿ ವೈರಾಗ್ಯ ಪೂರ್ಣನಾಗಿರಬೇಕು. ನಿಸ್ವಾರ್ಥಿಯಾಗಿ ಬ್ರಹ್ಮಜ್ಞಾನವನ್ನು ಮುಕ್ತಕಂಠದಿಂದ ತಿಳಿಸುವವನಾಗಿರಬೇಕು. ನಿಜವಾದ ಬ್ರಹ್ಮಜ್ಞಾನ ಪಡೆದು, ಜೀವನ ಸಾರ್ಥಕಪಡಿಸಿಕೊಂಡು, ಘೋರವಾದ ಸಂಸಾರ ಸಂಬಂಧವನ್ನು ಕಳೆಯುವಂತಹದೂ ಭಗವತ್ಕೈಂಕರ್ಯಪರವಾಗಿ ಬ್ರಹ್ಮ ಸಾನ್ನಿಧ್ಯವನ್ನು ಪಡೆಯುವಂತಹುದೂ ಆದ ವಿದ್ಯೆಯನ್ನು ಪಡೆಯಲು ಸದಾಚಾರ್ಯರನ್ನು ಆಶ್ರಯಿಸಿದವನೇ ಸಚ್ಛಿಷ್ಯ.

ಶಿಷ್ಯ ಲಕ್ಷಣವನ್ನು ಹೇಳುವಾಗ ಮುಮುಕ್ಷುಪ್ಪಡಿ 6-ನೇ ಸೂತ್ರದಲ್ಲಿ ಶಿಷ್ಯನೆನ್ನುವುದು ಸಾಧ್ಯಾಂತರ ನಿವೃತ್ತಿ, ಸಾಧನ, ಶುಶ್ರೂಷೆ, ಆರ್ತಿ, ಆದರ, ಅನಸೂಯೆ – ಇವುಗಳುಳ್ಳವನೇ ಅಲ್ಲದೇ ಮತ್ತವರಲ್ಲ ಎಂದಿರುವುದು. ಮತ್ತು 'ಅಸ್ತಿರೋಧರ್ಮ ಶೀಲಶ್ಚ ಶೀಲವಾನ್ ವೈಷ್ಣವಃ ಶುಚಿಃ। ಗಂಭೀರಶ್ಚ ತುರೋ ಧೀರಃ ಶಿಷ್ಯ ಇತ್ಯಭಿಧೀಯತೇ॥ ಎಂದು ಆಸ್ತಿಕನಾಗಿ, ಧರ್ಮಶೀಲನಾಗಿ, ಶೀಲವಂತನಾಗಿ, ದೈವಭಕ್ತನಾಗಿ, ಶುಚಿಯಾಗಿ, ಗಂಭೀರನಾಗಿ, ಚತುರನಾಗಿ, ಧೀರಗುಣವುಳ್ಳವನಾಗಿರುವವನು ಶಿಷ್ಯನೆನ್ನಲ್ಪಡುವನೆಂದೂ, ಜಯ ಸಂಹಿತೆಯಲ್ಲಿ ವರಾಹರ ವಾಕ್ಯದಲ್ಲಿ "ಶರೀರಂ ವಸು ವಿಜ್ಞಾನಂ ವಾಸಃ ಕರ್ಮಗುಣಾನಸೂನ್, ಗುರ್ವರ್ಥಂ ಧಾರಯೇದ್ಯಸ್ತು ಸ ಶಿಷ್ಯೋ ನೇತರಸ್ಸ್ಮೃತಃ" ಎಂಬುದಾಗಿ ಶರೀರ, ಹಣ, ಪ್ರಾಣ ಎಲ್ಲವನ್ನೂ ಗುರುವಿಗಾಗಿ ಪಣವಾಗಿಟ್ಟವನು ಶಿಷ್ಯನೆಂದೂ ಮತ್ತೂ ಈ ಕೆಳಗಿನ ಸೊಗಸಾದ ಶ್ಲೋಕವೊಂದರಲ್ಲಿ ಉಕ್ತವಾದಂತೆ ಶಿಷ್ಯನನ್ನು ಪರೀಕ್ಷಿಸಿ, ಆರಿಸಿ ಅವನಿಗೆ ಮಾತ್ರ ಬ್ರಹ್ಮವಿದ್ಯಾ ದಾನಮಾಡಬೇಕೆಂದೂ ತಿಳಿಸಿದೆ.

ಸದ್ಬುದ್ಧಿಸ್ಸಾಧುಸೇವೀ
ಸಮುಚಿತಚರಿತಃ ತತ್ತ್ವಬೋಧಾಭಿಲಾಷೀ,
ಶುಶ್ರೂಷುಃ ತ್ಯಕ್ತಮಾನಃ
ಪ್ರಣಿಪತನ ಪರಃ ಪ್ರಶ್ನಕಾಲ ಪ್ರತೀಕ್ಷಃ।
ಶಾಂತೋದಾಂತೋಽನಸೂಯುಃ
ಶರಣಮುಪಗತಃ ಶಾಸ್ತ್ರ ವಿಶ್ವಾಸಶಾಲೀ
ಶಿಷ್ಯಃ ಪ್ರಾಪ್ತಃ ಪರೀಕ್ಷಾಂ
ಕೃತವಿದಭಿಮತಂ ತತ್ತ್ವತಃ ಶಿಕ್ಷಣೀಯಃ॥

ಶಿಷ್ಯನಾದವನು ಹೇಳಿದ ಉಪದೇಶವಾರ್ತೆಗಳ ಅರ್ಥವನ್ನು ಯಥಾವತ್ತಾಗಿ ಗ್ರಹಿಸುವ ಸದ್ಬುದ್ಧಿ ಉಳ್ಳವನಾಗಿರಬೇಕು. ಏಕೆಂದರೆ ಮೂರ್ಖರಿಗೆ ಮಾಡಿದ ಉಪದೇಶ 'ಗೋರ್ಕಲ್ಲ ಮೇಲೆ ಮಳೆಸುರಿದಂತೆ' ವ್ಯರ್ಥವಾಗುತ್ತದೆ ಮತ್ತು ಕಣ್ಣುಗಳಿಲ್ಲದವನಿಗೆ ಕನ್ನಡಿ ತೋರಿಸಿದಂತಾಗುತ್ತದೆ. ಸಾಧುಸೇವಿ ಎಂದರೆ ಧರ್ಮನಿರತರನ್ನು ಸೇವಿಸುವವನಾಗಿರಬೇಕು. ಮೆಚ್ಚುವಂತಹ ಸ್ವಭಾವವುಳ್ಳವನಾಗಿ, ತತ್ತ್ವಯಾವುದೆಂದು ತಿಳಿಯುವ ಅಭಿಲಾಷೆಯಿಂದಿದ್ದು, ಆಚಾರ್ಯರನ್ನು ಕೃತಜ್ಞತೆಯಿಂದ ಶುಶ್ರೂಷೆಮಾಡುವವನಾಗಿ, ಕಾಮ ಕ್ರೋಧ ರಹಿತನಾಗಿ, ವಿಧೇಯನಾಗಿ, ಯಾವಾಗ ಪ್ರಶ್ನೆಮಾಡಬೇಕೆಂದು ತಿಳಿದವನಾಗಿ ಅಂದರೆ ಉಪದೇಶ ಸಮಯದಲ್ಲಿ ಮಧ್ಯೆ ಬಾಯಿಹಾಕದೆ, ನಿಲ್ಲಿಸಿದಾಗ ಅನುಮಾನಗಳ ಪರಿಹಾರಾರ್ಥವಾಗಿ ಅನೇಕ ಪ್ರಶ್ನೆಗಳನ್ನು ಹಾಕಿ ವಿಷಯವನ್ನು

ಚೆನ್ನಾಗಿ ಗ್ರಹಿಸುವವನಾಗಿ, ಶಾಂತಸ್ವಭಾವ ವುಳ್ಳವನಾಗಿ, ಇಂದ್ರಿಯಗಳನ್ನು ವಶದಲ್ಲಿಟ್ಟು ಕೊಂಡವನಾಗಿ, ಸಬ್ರಹ್ಮಚಾರಿಗಳಲ್ಲಿ ಮತ್ಸರ ವಿಲ್ಲದವನಾಗಿ ಗುರುಗಳನ್ನೇ ಸರ್ವಪ್ರಕಾರದಲ್ಲಿ ನಂಬಿದವನಾಗಿ, ಶಾಸ್ತ್ರಗಳಲ್ಲಿ ವಿಶ್ವಾಸವುಳ್ಳವ ನಾಗಿರುವವನನ್ನು ನೋಡಿ, ಅವನನ್ನು ಚೆನ್ನಾಗಿ ಪರೀಕ್ಷಿಸಿ, ಶಿಷ್ಯನ ಯೋಗ್ಯತೆಯನ್ನು ತಿಳಿದು ಕೊಂಡು ಅಂತಹವನಿಗೆ ಬ್ರಹ್ಮತತ್ತ್ವವನ್ನು ಉಪದೇಶಿಸಬೇಕು. ಆಗ ಹೇಳಿಕೊಟ್ಟ ಆಚಾರ್ಯರಿಗೂ ಕೀರ್ತಿ, ಹೇಳಿಸಿಕೊಂಡ ಶಿಷ್ಯ ನಿಗೂ ಕಾರ್ಯಸಿದ್ಧಿ. ಅಪಾತ್ರನಿಗೆ ಹೇಳಿದ ವಿದ್ಯೆ ನಿಷ್ಫಲವಾಗುವುದು.

ತತ್ತ್ವವನ್ನು ತಿಳಿಯಲಪೇಕ್ಷಿಸುವ ಶಿಷ್ಯನು ಬ್ರಹ್ಮ ಪರನಾಗಿ, ಬ್ರಹ್ಮ ನಿಷ್ಠನಾಗಿ, ಬ್ರಹ್ಮಾನ್ವೇಷಣ ಪರನಾಗಿ, ಸಮಿತ್ತನ್ನು ಹಿಡಿದುಕೊಂಡು, ಪವಿತ್ರ ಪಾಣಿಯಾಗಿ ಆಚಾರ್ಯರನ್ನು ಸಮೀಪಿಸಿ ಉಪದೇಶ ಮಾಡಲು ಕೇಳಿಕೊಳ್ಳಬೇಕೆಂಬ ಅಂಶವನ್ನು ನಾವು ಪ್ರಶ್ನೋಪನಿಷತ್ತಿನಲ್ಲಿ, ಭಾರದ್ವಾಜನ ಮಗನಾದ ಸುಕೇಶ, ಶಿಬಿಯಮಗನಾದ ಸತ್ಯ ಕಾಮ, ಗರ್ಗಗೋತ್ರದ ಸೌರ್ಯಾಯಣಿ, ಅಶ್ವಲನ ಮಗನಾದ ಕೌಸಲ್ಯ, ವಿದರ್ಭದೇಶದ ಭಾರ್ಗವ ಮತ್ತು ಕತ್ಯನ ಮಗ ಕಬಂಧಿ ಎಂಬ ಆರುಮಂದಿ ಸತ್ ಶಿಷ್ಯರು "ಸಮಿತ್ಪಾಣಯಃ ಭಗವಂತಂ ಪಿಪ್ಪಲಾದ ಮುಪಸನ್ನಾಃ" ಎಂಬಂತೆ ಸಮಿತ್ತನ್ನು ಕೈಯ್ಯಲ್ಲಿ ಹಿಡಿದು ಬ್ರಹ್ಮಜ್ಞಾನಿ ಗಳಾದ ಪಿಪ್ಪಲಾದರ ಬಳಿಗೆ ಬಂದು ಪ್ರಾರ್ಥಿಸಿದಾಗ ಪಿಪ್ಪಲಾದರು ಅವರನ್ನು 'ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ಸಂವತ್ಸರಂ ಸ ವತ್ಸ್ಯ ಯಥಾಕಾಮಂ ಪ್ರಶ್ನಾನ್ ಪೃಚ್ಛಥ' ಎಂದು ಆಜ್ಞಾಪಿಸುತ್ತಾರೆ. ಒಂದು ವರ್ಷಕಾಲ ಆ ಶಿಷ್ಯರು, ತಪಸ್ಸಿನಿಂದಲೂ ಬ್ರಹ್ಮಚರ್ಯವ್ರತ ದಿಂದಲೂ ಶ್ರದ್ಧೆಯಿಂದ ಗುರುಗಳನ್ನು ಸೇವಿಸಿದ ಮೇಲೆ ಒಬ್ಬೊಬ್ಬರೂ ಪ್ರತ್ಯೇಕವಾಗಿ ಪ್ರಶ್ನೆಗಳನ್ನು ಹಾಕಿ ಬ್ರಹ್ಮಜ್ಞಾನ ಪಡೆಯುತ್ತಾರೆ. ಇದು ವಿದ್ಯಾರ್ಜನೆಗಾಗಿ ಬಂದ ಶಿಷ್ಯನನ್ನು ಪರೀಕ್ಷಿಸುವ ಕ್ರಮವಾಗಿತ್ತು ಎಂಬುದನ್ನು ತಿಳಿಯಬಹುದು.

ಶಿಷ್ಯನಿಗೆ ಅನೇಕ ಪ್ರಲೋಭನಗಳನ್ನುಂಟುಮಾಡಿ ಅವನು ಅವುಗಳಿಂದ ದೂರನಾಗಿ ಸ್ಥಿರ ಚಿತ್ತನಾ ದಾಗ ಬ್ರಹ್ಮವಿದ್ಯೆ ಅಥವಾ ಆತ್ಮವಿದ್ಯೆಯನ್ನು ಪದೇಶಿಸಿದ ಕ್ರಮವನ್ನು ನಾವು ಕಠೋಪನಿಷತ್ತಿನಲ್ಲಿ ಯಮ ನಚಿಕೇತರ ಸಂವಾದದಿಂದ ತಿಳಿಯ ಬಹುದು. ನಚಿಕೇತನು ಚೇತನರು ಸತ್ತ ಮೇಲೆ ಆತ್ಮನ ಗತಿಯೇನಾಗುತ್ತದೆ ಇತ್ಯಾದಿ ಪ್ರಶ್ನೆಗ ಳನ್ನು ಕೇಳಿದಾಗ "ವಿಷಯಾಂತರಾಸಕ್ತ ಚೇತಸೇ ಏತಾದೃಶ ಮುಕ್ತಾತ್ಮತತ್ತ್ವಂ ನೋಪದೇ ಶಾರ್ಹಂ" ವಿಷಯಾಂತರಾಸಕ್ತರಾದವರಿಗೆ ಇಂತಹ ಬ್ರಹ್ಮ ತತ್ತ್ವವನ್ನು ಹೇಳಬಾರದೆಂದು ಯೋಚಿಸಿದ ಯಮನು ನಚಿಕೇತನನ್ನು ಪ್ರಲೋಭಿ ಸುತ್ತಾ "ಶತಾಯುಷಃ ಪುತ್ರ ಪೌತ್ರಾನ್ ವೃಣೀಷ್ವ। ಬಹೂನ್ ಪಶೂನ್ ಹಸ್ತಿ ಹಿರಣ್ಯ ಮಶ್ವಾನ್ ಭೂಮೇ ರ್ಮಹದಾಯತನಂ ವೃಣೀಷ್ವ ಸ್ವಯಂ ಚ ಜೀವ ಶರದೋ ಯಾವದಿಚ್ಛಸಿ ಯೇ ಯೇ ಕಾಮಾ ದುರ್ಲಭಾ ಮರ್ತ್ಯಲೋಕೇ ಸರ್ವಾಂಚ್ಛಂದತಃ ಪ್ರಾರ್ಥಯಸ್ವ" ಎಂದು 'ದೀರ್ಘಾಯಸ್ಸು, ಮಕ್ಕಳು, ಮೊಮ್ಮಕ್ಕಳು, ಬಹು ಪಶುಗಳು, ಆನೆಗಳು, ಐಶ್ವರ್ಯ, ಭೂಮಿ, ಮನೆ ಮತ್ತು ಯಾವ ಯಾವುವು ಭೂಲೋಕದಲ್ಲಿ ಸಿಗಲಾರದೋ ಅಂತಹ ವೈಭವಗಳನ್ನೆಲ್ಲಾ ಕೊಡುತ್ತೇನೆ ತೆಗೆದುಕೋ ಹೊರಡು' ಎನ್ನುತ್ತಾನೆ. ನಚಿಕೇತ ಈ ಆಶೆ ಆಕಾಂಕ್ಷೆಗಳಿಗೆ ಆಸೆಪಡದೆ ತತ್ತ್ವಜ್ಞಾನವನ್ನೇ ಅಪೇಕ್ಷಿಸಿದಾಗ ಯಮನು ಮುಕ್ತಾತ್ಮ ತತ್ತ್ವವನ್ನು ಬೋಧಿ ಸುತ್ತಾನೆ. ಇದೂ ಒಂದು ವಿಧದ ಪರೀಕ್ಷೆ. ಆಶೆ ಆಕಾಂಕ್ಷೆ ಇವೆಲ್ಲವನ್ನು ಮೀರಿನಿಂತವನಿಗೆ ಮಾತ್ರ ತತ್ತ್ವಜ್ಞಾನ ಉಪದೇಶಿಸಬೇಕು ಎಂಬುದು ಗುರು ಶಿಷ್ಯರಲ್ಲಿ ನಿಯಮ.

ಆಚಾರ್ಯರು ಶಿಷ್ಯನ ಹಿತವನ್ನು ಕೋರಿ, ತಾನೇ ಉಪದೇಶಮಾಡುವವನೆಂಬ ಅಹಂಕಾರ ಬಿಟ್ಟು ತಮ್ಮ ಆಚಾರ್ಯರನಿಯಮನವಿದು ಎಂದು ಉಪದೇಶಿಸಬೇಕು. ಶಿಷ್ಯನು ತನ್ನದೆಲ್ಲವನ್ನೂ ಆಚಾರ್ಯರಿಗರ್ಪಿಸಿ, ಅವರ ಸಾನ್ನಿಧ್ಯದಲ್ಲಿದ್ದು ಶ್ರದ್ಧೆಯಿಂದ ಬ್ರಹ್ಮತತ್ತ್ವ ತಿಳಿದುಕೊಳ್ಳಬೇಕು. ಆಗ ಗುರುಶಿಷ್ಯ ಸಂಬಂಧ ಸಾರ್ಥಕವಾಗುತ್ತದೆ.

# ಕಿಶೋರ ಜಗತ್



## ಪರೀಕ್ಷಿತ

ಅರ್ಜುನನಿಗೆ ಶ್ರೀಕೃಷ್ಣನ ಸೋದರಿಯಾದ ಸುಭದ್ರೆಯಿಂದ ಅಭಿಮನ್ಯು ಎಂಬ ಪುತ್ರನಾದನು. ಅಭಿಮನ್ಯು ಮತ್ತು ವಿರಾಟ ಪುತ್ರಿಯಾದ ಉತ್ತರೆಯಲ್ಲಿ ಜನಿಸಿದವನೇ ಪರೀಕ್ಷಿತ ಮಹಾರಾಜ. ಪರೀಕ್ಷಿತರಾಜ ನೀತಿವಂತನೂ, ಧಾರ್ಮಿಕನೂ, ಹಿರಿಯರನ್ನು ಗೌರವಿಸುವವನೂ ಆದ ವ್ಯಕ್ತಿಯಾಗಿದ್ದನು. ಆದರೆ ಪ್ರಾರಬ್ಧ ಕರ್ಮಾನುಸಾರ ತನ್ನದೇ ಅಚಾತುರ್ಯದಿಂದ ಪ್ರಾಣವನ್ನೇ ಕಳೆದುಕೊಳ್ಳುವ ಸನ್ನಿವೇಶವನ್ನು ತಂದುಕೊಂಡ.

ಒಮ್ಮೆ ಈತನು ಬೇಟೆಗೆ ಹೋಗಿದ್ದಾಗ, ಆಯಾಸದಿಂದ ಶಮೀಕ ಮುನಿಯ ಆಶ್ರಮವನ್ನು ಪ್ರವೇಶಿಸಿದ. ಯೋಗ ಸಮಾಧಿಸ್ಥನಾಗಿ ಕುಳಿತಿದ್ದ ಶಮೀಕ ಮುನಿ ಈತನನ್ನು ಉಪಚರಿಸಲಿಲ್ಲ. ಆಗ ಪರೀಕ್ಷಿತ ರಾಜ ಕೋಪಗೊಂಡು ಸಮೀಪದಲ್ಲಿದ್ದ ಸತ್ತ ಹಾವನ್ನು ತನ್ನ ಬಿಲ್ಲಿನಿಂದ ತೆಗೆದು ಆ ಋಷಿಗೆ ಸರಮಾಲೆಯ ರೀತಿಯಲ್ಲಿ ಕೊರಳಿಗೆ ಹಾಕಿ ರಾಜ್ಯಕ್ಕೆ ಹಿಂತಿರುಗಿದ.

ಸ್ವಲ್ಪ ಹೊತ್ತಿನಲ್ಲಿಯೇ ಶಮೀಕ ಋಷಿಯ ಪುತ್ರ ತಪಸ್ವಿ ಶೃಂಗಿ ಅಲ್ಲಿಗೆ ಬಂದನು. ತನ್ನ ತಂದೆಯ ಕೊರಳಲ್ಲಿ ಸತ್ತ ಹಾವನ್ನು ಮಾಲೆಯಂತೆ ಹಾಕಿರುವುದು ಕುಪಿತನಾದ. "ನಮ್ಮ ತಂದೆಯ ಕೊರಳಿಗೆ ಸತ್ತ ಹಾವನ್ನು ಹಾಕಿ ಅಪಮಾನ ಮಾಡಿರುವಾತ ಇಂದಿಗೆ ಏಳು ದಿನದೊಳಗೆ ಹಾವು ಕಚ್ಚಿ ಮರಣಿಸಲಿ'' ಎಂದು ಶೃಂಗಿಯು ಶಾಪವಿತ್ತನು

ಬಳಿಕ ತಪದಿಂದ ಎಚ್ಚೆತ್ತ ಶಮೀಕ ಮುನಿ ತನ್ನ ಪುತ್ರನಿಂದ ಆದ ಕೃತ್ಯಕ್ಕೆ ಚಿಂತಿಸಿ, ಪರೀಕ್ಷಿತ ರಾಜನಿಗೆ ಈ ಶಾಪದ ಸುದ್ದಿಯನ್ನು ತನ್ನ ಶಿಷ್ಯರ ಮುಖಾಂತರ ತಿಳಿಸಿದ, ಅದಕ್ಕೆ ತಕ್ಕ ಪರಿಹಾರವನ್ನು ಕಂಡುಕೊಳ್ಳುವಂತೆಯೂ ತಿಳಿಸಿದ್ದ. ಪರೀಕ್ಷಿತರಾಜ ತನ್ನ ದುಷ್ಕಾರ್ಯಕ್ಕೆ ಮರುಗಿ ಸಮುದ್ರದ ನಡುವೆ ಎತ್ತರವಾದ ಸೌಧವನ್ನು ನಿರ್ಮಿಸಿಕೊಂಡನು. ಪ್ರಾಯೋಪವಿಷ್ಟನಾಗಿ ವ್ಯಾಸ ಪುತ್ರರಾದ ಶುಕಾಚಾರ್ಯರಿಂದ ಭಾಗವತದ ಕಥೆಯನ್ನು ಶ್ರವಣ ಮಾಡಲು ಪ್ರಾರಂಭಿಸಿದನು. ಶುಕಾಚಾರ್ಯರು ಅನೇಕ ದಿವ್ಯ ಜ್ಞಾನ ಕಥೆಗಳನ್ನು ವೈಷ್ಣವ ಭಕ್ತರ ನೀತಿಯುತ ಕಥಾಸಂಗ್ರಹವನ್ನು ತಿಳಿಸಿದ್ದಲ್ಲದೇ ಕೊನೆಯದಾಗಿ ಮರಣಿಸಲು ದುಃಖ ಪಡಬಾರದೆಂದು ಪರಮಾತ್ಮನ ಜ್ಞಾನವನ್ನು ತಿಳಿಸಿದರು.

ಶೃಂಗಿಯ ಶಾಪದಿಂದ ಆಜ್ಞಪ್ತನಾದ ತಕ್ಷಕನೆಂಬ ಸರ್ಪವು ಪರೀಕ್ಷಿತನನ್ನು ಕೊಲ್ಲಲು ಬರುತ್ತಿರುವಾಗ, ಮಾರ್ಗ ಮಧ್ಯದಲ್ಲಿ ಕಶ್ಯಪನೆಂಬ ಬ್ರಾಹ್ಮಣ ವೈದ್ಯನು ಪರೀಕ್ಷಿತನನ್ನು ಬದುಕಿಸುವ ಸಲುವಾಗಿ ಹೊರಟಿದ್ದು, ಈರ್ವರು ಸಂಧಿಸಿದರು. ತಮ್ಮ ಕಾರ್ಯಗಳ ಬಗ್ಗೆ ವಿಚಾರ ವಿನಿಮಯ ಮಾಡಿಕೊಂಡ ನಂತರ, ಪರೀಕ್ಷಾ ಗೃಷ್ಟಿಯಿಂದ ತಕ್ಷಕನು ತನ್ನ ವಿಷಜ್ವಾಲೆಯಿಂದ ಸಮೀಪದಲ್ಲಿದ್ದ ಆಲದ ಮರವನ್ನು ಅದರ ಮೇಲೆ ಇದ್ದ ಬ್ರಾಹ್ಮಣನ ಸಮೇತ ದಹಿಸಿದನು. ವೈದ್ಯ ಕಶ್ಯಪನು ಮಂತ್ರ ಸಿದ್ಧಿಯಿಂದ ಮರವನ್ನು ಚಿಗುರಿಸಿದ್ದಲ್ಲದೇ ಅದರ ಮೇಲಿದ್ದ ಬ್ರಾಹ್ಮಣನನ್ನು ಬದುಕಿಸಿದನು. ಆಗ ತಕ್ಷಕನು ತಪಸ್ವಿಯ ಶಾಪವನ್ನು ವ್ಯರ್ಥಮಾಡಬಾರದೆಂದು ದ್ರವ್ಯವನ್ನು ನೀಡಿ ಕಶ್ಯಪನನ್ನು ಹಿಂತಿರುಗಿಸಿದನು.

ಏಳನೆಯ ದಿನದಂದು ಪರೀಕ್ಷಿತ ರಾಜನ ಸಂದರ್ಶನಾರ್ಥವಾಗಿ ಬಂದ ಬ್ರಾಹ್ಮಣರು ತಂದು ಕೊಟ್ಟ ಹಣ್ಣಿನಲ್ಲಿ ಸೂಕ್ಷ್ಮರೂಪದಿಂದ ತಕ್ಷಕನು ಹೊಕ್ಕಿದ್ದನು. ಆ ಹಣ್ಣನ್ನು ಪರೀಕ್ಷಿತನು ಮೂಸಿ ನೋಡಿದಾಗ, ಅದರಿಂದ ತಕ್ಷಕನು ಹೊರಬಂದು ಪರೀಕ್ಷಿತ ರಾಜನನ್ನು ಕಚ್ಚಿದನು. ಶೃಂಗಿಯ ಶಾಪದಂತೆ ಪರೀಕ್ಷಿತ ಮರಣಿಸಿದನು.

**ಶ್ರೀ ಜಿ. ಶ್ರೀಧರ್**

# ಭಾಗವತದ ಕಥೆಗಳು

## ಆಸ್ತೀಕ ಮಹರ್ಷಿ

ಭೃಗು ವಂಶದಲ್ಲಿ ಜರತ್ಕಾರು ಎಂಬ ಮಹರ್ಷಿ ಹಾಗೂ ಮೇಧಾವಿ ಇದ್ದನು. ಈತನು ನಿಷ್ಠಾವಂತ. ತನ್ನ ಬ್ರಹ್ಮಚರ್ಯ ಜೀವನದಿಂದಲೇ ಇಹವನ್ನು ದೂಡಲು ನಿರ್ಧರಿಸಿದ್ದನು. ಆದರೆ ಕೆಲವು ಕಾಲದ ನಂತರ ಒಂದು ಬಾವಿಯಲ್ಲಿ ಆತನ ಪಿತೃದೇವತೆಗಳು ಹುಲ್ಲು ಕಡ್ಡಿಗೆ ತಲೆಕೆಳಗಾಗಿ ಜೋತುಬಿದ್ದಿದ್ದು ಅವರು ಗೋಳಾಡುತ್ತಿರುವುದನ್ನು ಕಂಡನು. "ಅಯ್ಯಾ ನೀವು ಯಾರು? ಈ ರೀತಿ ಘೋರವಾಗಿ ನೋವು ಅನುಭವಿಸುತ್ತಿರಲು ಕಾರಣವೇನು?'' ಎಂದು ಜರತ್ಕಾರು ಪ್ರಶ್ನಿಸಿದನು. ಆಗ ಅವರು 'ತಮ್ಮ ವಂಶದಲ್ಲಿ ಜರತ್ಕಾರು ಎಂಬುವನು ಜನಿಸಿ ನಮ್ಮ ಈ ದುರವಸ್ಥೆಗೆ ಕಾರಣನಾಗಿದ್ದಾನೆ. ಆತನು ಮದುವೆಯಾಗದೆ ಇರುವುದರಿಂದ, ಸಂತಾನ ಹೀನನಾಗಿದ್ದುದರಿಂದ ನಮಗೆ ಈ

ದುರವಸ್ಥೆ ಪ್ರಾಪ್ತಿಯಾಗಿದೆ' ಎಂದು ಉತ್ತರಿಸಿದರು.

ಆಗ ಜರತ್ಕಾರು ಅಪಮಾನಿತನಾಗಿ "ನಾನೇ ಆ ಜರತ್ಕಾರು. ನಿಮ್ಮನ್ನು ಈ ದುರವಸ್ಥೆಯಿಂದ ನಾನು ಪಾರು ಮಾಡುವಂತಹನಾಗುತ್ತೇನೆ. ಆದರೆ ನನ್ನ ಸ್ವನಾಮಧೇಯವುಳ್ಳ ಸ್ತ್ರೀಯನ್ನು ವಿವಾಹವಾಗುವೆನು" ಎಂದು ಅವರನ್ನು ಸಮಾಧಾನಪಡಿಸಿದನು. ಸ್ವನಾಮಧೇಯವುಳ್ಳ ಸ್ತ್ರೀಯರು ಸಿಗುವುದು ಅಪರೂಪ, ಅದಿಲ್ಲದೆ ನನ್ನ ಬ್ರಹ್ಮಚರ್ಯಕ್ಕೆ ತೊಂದರೆಯಾಗದು ಎಂದು ಆತ ಭಾವಿಸಿದ್ದನು. ಆದರೂ ಆತನ ಪಿತೃ ದೇವತೆಗಳು ಈ ನಿಬಂಧನೆಗೆ ಸಮ್ಮತಿ ಸೂಚಿಸಿದರು.

ಸರ್ಪರಾಜನಾದ ವಾಸುಕಿಯ ಸಹೋದರಿಯ ಹೆಸರು ಜರತ್ಕಾರು ಆಗಿತ್ತು. ಆಕೆಯು ಇನ್ನು ಕನ್ಯೆಯಾಗಿಯೇ ಇದ್ದುದರಿಂದ ಆಕೆಯನ್ನು ಈ ಜರತ್ಕಾರು ಮಹರ್ಷಿ ವಿವಾಹವಾಗಬೇಕಾಯಿತು. ಜರತ್ಕಾರು ವಾಸುಕಿಯನ್ನು ಸಂಧಿಸಿ, ಆತನ ಸೋದರಿಯನ್ನು ವಿವಾಹವಾಗಲು ಅಣಿಯಾದ. ವಾಸುಕಿಯು ಸಮ್ಮತಿಸಿ ವಿವಾಹವನ್ನು ಮಾಡಿಕೊಟ್ಟ. ಬಳಿಕ ಜರತ್ಕಾರು ಆಕೆಯನ್ನು ಹೊಂದಿಕೊಂಡು ಸುಖಿಯಾಗಿದ್ದ. ಅವರಿಗೆ ಆಸ್ತೀಕನೆಂಬ ಮಗುವಿನ ಜನನವಾಯಿತು.

ಒಮ್ಮೆ ಜರತ್ಕಾರು ಸಂಧ್ಯಾ ಸಮಯವಾದರೂ ನಿದ್ರಿಸುತ್ತಿದ್ದ. ಸಂಧ್ಯಾ ಸಮಯದಲ್ಲಿ ಸೂರ್ಯದೇವರಿಗೆ ಅರ್ಘ್ಯ ನೀಡಲು ಇತರ ಋಷಿಗಳು ಹೋಗುತ್ತಿದ್ದರು. ಆಶ್ರಮದಲ್ಲಿ ಎಚ್ಚರವಾಗಿದ್ದ ಜರತ್ಕಾರು ತನ್ನ ಗಂಡನಿಗೆ ಅರ್ಘ್ಯ ನೀಡಲು ಸಂಧ್ಯಾ ಸಮಯ ಮೀರಿ ಹೋಗಬಹುದೆಂದು ಹೆದರುತ್ತಲೇ, ತನ್ನ ಗಂಡನನ್ನು ಎಚ್ಚರಗೊಳಿಸಿದಳು. ಈಕೆಯಿಂದ ದೂರ ಹೋಗಲು ನಿರ್ಧರಿಸಿದ್ದ ಆ ಋಷಿ ಈ ಸನ್ನಿವೇಶವನ್ನು ಬಳಸಿಕೊಂಡನು. ಎಚ್ಚೆತ್ತ ಋಷಿ ತನ್ನ ಹೆಂಡತಿ ತನ್ನನ್ನು ಅಪಮಾನ ಮಾಡಿದಂತೆ ಎಂದು ತಿಳಿದು ತಪಸ್ಸಿಗಾಗಿ ಅರಣ್ಯಕ್ಕೆ ಹೋದನು.

ಇತ್ತ ಆಸ್ತೀಕ ಮಹರ್ಷಿ ತಾಯಿಯ ಬಳಿ ಇದ್ದು ಸಕಲ ಶಾಸ್ತ್ರಗಳನ್ನು ಅರಿತು ಮೇಧಾವಿಯಾದನು. ಈತನ ತಪೋನಿಷ್ಠೆಯು ಅಚಲವಾಗಿತ್ತು. ಹಿಂದೆ ಪರೀಕ್ಷಿತ ರಾಜನನ್ನು ತಕ್ಷಕನು ಕೊಲ್ಲುವುದನ್ನು ತಪ್ಪಿಸಿ ಬದುಕಿಸಲು ಬರುತ್ತಿದ್ದ ಕಶ್ಯಪ ಬ್ರಾಹ್ಮಣನನ್ನು ಹಿಂದಕ್ಕೆ ಕಳುಹಿಸಿದ್ದು ತಿಳಿದು ಪರೀಕ್ಷಿತರಾಜನ ಮಗ ಜನಮೇಜಯನು ಸರ್ಪವಂಶವನ್ನು ನಾಶಮಾಡಿಸಲು ಸರ್ಪಯಾಗವನ್ನು ಆರಂಭಿಸಿದ. ಅನೇಕ ಸರ್ಪಗಳು ಆಹುತಿಯಾದವು. ತಕ್ಷಕ ಇಂದ್ರನನ್ನು ಮೊರೆಹೊಕ್ಕನು. ಜನಮೇಜಯನು ಋತ್ವಿಕರಿಂದ ಈ ವಿಷಯ ತಿಳಿದು ಇಂದ್ರನ ಸಹಿತ ತಕ್ಷಕನನ್ನು ಆಹುತಿಯಾಗುವಂತೆ ಮಾಡಲು ತಿಳಿಸಿದ. ಈ ಸಂದರ್ಭದಲ್ಲಿ ಆಸ್ತೀಕ ಮಹರ್ಷಿ ಬಂದು ಸರ್ಪಯಾಗವನ್ನು ನಿಲ್ಲಿಸುವಂತೆ ಅಭಯವನ್ನು ಪಡೆದನು. ಆಗ ತಕ್ಷಕ ಮತ್ತು ಇಂದ್ರರು ಆಹುತಿಯಾಗುವುದು ತಪ್ಪಿತು.

ಆದ್ದರಿಂದಲೇ ಸರ್ಪಗಳು ಆಸ್ತೀಕ ಋಷಿಯ ಈ ಉಪಕಾರಕ್ಕೆ ಋಣಿಯಾದವು. ಜನಮೇಜಯ ಈ ಸಾತ್ತ್ವಿಕ ತ್ಯಾಗದಿಂದ ಖ್ಯಾತನಾದನು.

★

# ಚಕ್ರತೀರ್ಥ ಹನುಮಂತ

ಒಂದು ಕಾಲದಲ್ಲಿ ಹನುಮಂತನ ಪೂಜೆ ದಕ್ಷಿಣ ಭಾರತಕ್ಕೆ ಮಾತ್ರ ಸೀಮಿತ ಎಂದಿತ್ತು. ಆದರೆ ಇಂದು ಹಾಗಲ್ಲ. ಈ ಮಹಾನುಭಾವ ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ಪೂಜೆಗೊಳ್ಳುತ್ತಲಿದ್ದಾನೆ. ಅಂದು ಸುಗ್ರೀವನ ರಾಜಧಾನಿ ಎಂದು ಕರೆಸಿಕೊಂಡ ನೆಲ ಇಂದು ಕನ್ನಡನಾಡಿನ ನಡುಭೂಮಿ. ಅಭೇದ್ಯ ಕೋಟೆಯಂತೆ ಎದ್ದು ನಿಂತಿರುವ ಋಷ್ಯಮೂಕ ಪರ್ವತಾವಳಿಗಳ ತಪ್ಪಲು ಪ್ರದೇಶವೆಲ್ಲ ವಾಲಿ ಸುಗ್ರೀವರ ಮಹಾಸಾಮ್ರಾಜ್ಯ ಎಂದು ಕರೆಸಿಕೊಳ್ಳುತ್ತಿತ್ತು. ಹನುಮಂತ ಸುಗ್ರೀವನ ಪರಮಾಪ್ತ ಸಚಿವ. ಆರ್ಯಪುರುಷ ಶ್ರೀ ರಾಮಚಂದ್ರನಿಗೆ ಇವರಿಬ್ಬರೂ ಪ್ರಾಣ ಪ್ರಿಯರು. ಶ್ರೀರಾಮಚಂದ್ರನ ಪಂಚಾಯತನದಲ್ಲಿ ಈ ಸುಗ್ರೀವ ಹನುಮಂತರಿಗೂ ವಿಶೇಷ ಸ್ಥಾನವಿದೆ. ಇನ್ನು ಬೆಂಗಳೂರಿನಲ್ಲಿ ಸುಗ್ರೀವನ ದೇವಸ್ಥಾನವು ಒಂದುಂಟು.

ಆಂಜನೇಯನ ಅವತಾರವಾದುದು ಅಂಜನಾದ್ರಿ ಎಂಬ ಬೆಟ್ಟದಲ್ಲಿ. ತಂದೆ ಕೇಸರಿ ಎಂಬ ವಾನರ ವೀರ. ಈತ ವಾಯು ಸಂಭೂತನೆಂದೂ, ರುದ್ರಾಂಶನೆಂದೂ, ಭಾವೀ ರುದ್ರನೆಂದೂ ಮರುದ್ಗಣಕ್ಕೆಲ್ಲ ಸಂಬಂಧಿಸಿದವನಾದುದರಿಂದ ಮಾರುತಿ ಎಂದೂ, ಭಾರತೀರಮಣನೆಂದೂ, ಮುಖ್ಯಪ್ರಾಣನೆಂದೂ ಕರೆಯುವುದು ವಾಡಿಕೆ-ಇಷ್ಟೆಲ್ಲ ಹೆಸರುಗಳಿದ್ದರೂ ಸಹ ಈತ ರಾಮಭಕ್ತ-ಹನುಮಂತನೆಂದೇ ಸರ್ವರ ಪ್ರೀತಿಪಾತ್ರ.

ಹನುಮಂತನ ವಿಚಾರದಲ್ಲಿ ಕೆಲವು ತಾಂತ್ರಿಕ ಪ್ರಸಕ್ತಿಗಳೂ ಇವೆ — "ಓಂ ನಮೋ ಭಗವತೇ ಆಂಜನೇಯಾಯ ಮಹಾಬಲಾಯ ಸ್ವಾಹಾ" ಮತ್ತು "ಹುಂ ಹನುಮತೇ ರುದ್ರಾತ್ಮಕಾಯ ಹ್ರುಂ ಫಟ್ ಎಂಬ ಸಿದ್ಧಿ ಮಂತ್ರ ಗಳೊಂದಿಗೆ ವಿದ್ಯಾಪ್ರದಾನಕ್ಕಾಗಿ ಪ್ರಾರ್ಥಿಸುವ ಮಂತ್ರವೂ ಒಂದಿದೆ.

ಅಂಜನೇಯ ಮತಿಪಾಟಲಾನನಂ
ಕಾಂಚನಾದ್ರಿ ಕಮನೀಯ ವಿಗ್ರಹಂ ।
ಪಾರಿಜಾತ ತುರುಮೂಲ ವಾಸಿನಂ
ಭಾವಯಾಮಿ ಪವಮಾನ ನಂದನಂ ॥

ಈ ಮಂತ್ರವನ್ನು ಪಠಿಸುವುದರಿಂದ ವಿದ್ಯಾರ್ಥಿಗಳಿಗೆ ಯಶಪ್ರಾಪ್ತಿಯಾಗುವದೆಂಬ ನಂಬಿಕೆಯೂ ಇದೆ. ನಮ್ಮ ಪ್ರಾಚೀನರು ಈ ದೇವನನ್ನು ಶಿಲೆ, ಪಂಚಲೋಹ ಹಾಗೂ ಮರ ಮೊದಲಾದವುಗಳಲ್ಲಿ ಬಿಡಿಸಿ ಪೂಜಿಸುವುದುಂಟು. ಸಾಮಾನ್ಯವಾಗಿ ಒಂದು ಬದಿಗೆ ಮುಖ, ಹಣೆಯಲ್ಲಿ ಹರಿನಾಮ, ಹಾರುಗಾಲು, ಎಡಗೈಯಲ್ಲಿ ವೃಕ್ಷವನ್ನೋ ಅಥವಾ ಸಂಜೀವಿನೀ ಪರ್ವತವನ್ನೋ ಹಿಡಿದಿದ್ದು ಬಲಗೈ ಅಭಯ ಹಸ್ತವಿರುತ್ತದೆ. ಇಂಥ ವಿಗ್ರಹಗಳೇ ಹೆಚ್ಚಾಗಿ ಕಾಣಸಿಗುವುದುಂಟು. ಇನ್ನು ಕೆಲವು ವಿಷ್ಣು ದೇವಾಲಯಗಳಲ್ಲಿ ಹಸನ್ಮುಖವಾಗಿ ನಿಂತು ಕೈ ಮುಗಿದಿರುವ ವಿಗ್ರಹಗಳೂ ಇವೆ. ಇಂಥ ವಿಗ್ರಹಗಳಿಗೆ ಸಂಜೀವ ಮುಖ್ಯಪ್ರಾಣನೆನ್ನುತ್ತಾರೆ. ತಿರುಪತಿಯ ಶ್ರೀನಿವಾಸನ ಮುಂದೆ ಇಂಥ ವಿಗ್ರಹವಿರುವುದನ್ನು ಇಲ್ಲಿ ಸ್ಮರಿಸಬಹುದು. ಕೆಲವು ಮಠಗಳಲ್ಲಿ ವಾನರ, ಸಿಂಹ, ವರಾಹ, ಗರುಡ, ಹಯ ಎಂಬ ಪಂಚಮುಖ ಹಾಗೂ ಹತ್ತು ಕೈ, ಅವುಗಳಲ್ಲಿ ಭೀಷಣ, ಖಡ್ಗ, ತ್ರಿಶೂಲ ಶಂಖ, ಚಕ್ರ, ಪಾಶ, ಅಂಕುಶ, ಮುಸಲ, ಮೊದಲಾದ ಆಯುಧಗಳನ್ನು ಧರಿಸಿದ ಪಂಚಲೋಹದ ಅಪರೂಪವೆನಿಸಬಹುದಾದ ಕೆಲವು ವಿಗ್ರಹಗಳೂ ಇವೆ. ಮಂತ್ರಾಲಯದ ಗುರು ರಾಘವೇಂದ್ರರು ತುಂಗಭದ್ರಾನದಿಯ ಇನ್ನೊಂದು ಭಾಗದಲ್ಲಿಯ ಗಾಣಧಾಳ ಪಂಚಮುಖೀ ಆಂಜನೇಯನನ್ನು ಆರಾಧಿಸಿದರಂತೆ. ಇಂದಿಗೂ ಭಕ್ತರು ಗಾಣದಾಳಕ್ಕೆ ಹೋಗಿಬರುವುದುಂಟು.

## ವ್ಯಾಸತೀರ್ಥರ ಅಂಜನೇಯ

ವ್ಯಾಸರಾಯರು ವಿಜಯನಗರ ಸಾಮ್ರಾಜ್ಯಕ್ಕೆ ಬಂದ ಕುಹುಯೋಗವನ್ನು ನಿವಾರಿಸಿದವರು. ಚಕ್ರತೀರ್ಥದ ಬಲಭಾಗಕ್ಕೆ ಇವರ ಮಠವಿತ್ತು. ಪ್ರತಿದಿನ ಇವರು ಚಕ್ರತೀರ್ಥದಲ್ಲಿ ಮಿಂದು ಕೋದಂಡರಾಮನ ಎಡಭಾಗದಲ್ಲಿರುವ ಗುಡ್ಡದಲ್ಲಿ ತಪಸ್ಸಿಗೆ ಕೂಡುತ್ತಿದ್ದರು. ಅವರ ಮುಂಭಾಗದಲ್ಲಿರುವ ಬೃಹದಾಕಾರದ ಬಂಡೆಯಿಂದ ಒಂದು ಕೋತಿಯು ಬಂದು ಅವರ ಸುತ್ತು ಸುಳಿಯುತ್ತಿತ್ತು. ಸ್ವಾಮಿಗಳು ಕಣ್ಣೆತ್ತಿದಾಗ ಅದು ಮಾಯವಾಗುತ್ತಿತ್ತು. ಹೀಗೆ ಬಹು ದಿನ ಸಾಗಿತು. "ಈ ಕಣ್ಣು ಮುಚ್ಚಾಟದ ರಹಸ್ಯವೇನು? ಎಂದು ಅವರು ಚಿಂತಿಸತೊಡಗಿದರು. ಆಗ "ನೀನೇ ವರಗುರು ಮುಖ್ಯಪ್ರಾಣ" ಎಂದು ಅನನ್ಯವಾಗಿ ಸ್ತೋತ್ರ ಮಾಡಿದರು. ಕೊನೆಗೊಂದು ದಿನ ಅವರ ಸ್ವಪ್ನದಲ್ಲಿ ಹನುಮಂತನು ಕಾಣಿಸಿಕೊಂಡು "ರಾಯರ ಪ್ರಥಮ ದರ್ಶನ ಈ ಬಂಡೆಯ ಮೇಲೆಯೇ ನಮಗಾಗಿದೆ. ಆದುದರಿಂದ ಇಲ್ಲಿ ನಮ್ಮ ಪ್ರಾಣ ಪ್ರತಿಷ್ಠಾಪನೆ ಕಾರ್ಯವಾಗಬೇಕಾಗಿದೆ" ಎಂಬ ಸೂಚನೆ ಆಯಿತು.

ಮರುದಿನ ಅವರು ಆ ಬಂಡೆಯ ಮೇಲೆ ಅಂಗಾರದಿಂದ ಆಂಜನೇಯನನ್ನು ಬಿಡಿಸಿ ಧ್ಯಾನಾಸಕ್ತರಾದರು. ಕಣ್ತೆರೆದಾಗ ಅದೆಲ್ಲ ಅಳಿಸಿ ಹೋಗಿತ್ತು. ಹೀಗೆ ಹನ್ನೆರಡು ಸಲ ನಡೆದು ಹೋಯಿತು. ಆಗ ಗುರುಗಳು ಒಂದು ಮಂಗ ಇನ್ನೊಂದು ಮಂಗನ ಬಾಲಹಿಡಿದಂತೆ ಹನ್ನೆರಡು ಮಂಗಗಳ ವರ್ತುಲಾಕಾರವನ್ನು ರಚಿಸಿದರು. ಅದರ ಮಧ್ಯದಲ್ಲಿ ಆರುಕೋನಗಳುಳ್ಳ ಯಂತ್ರವನ್ನು ಮಾಡಿ ಮಧ್ಯದಲ್ಲಿ ಯೋಗಾಸನಯುಕ್ತನಾದ ಹನುಮಂತ ಜಪಮಾಲೆ ಹಿಡಿದಿರುವಂತೆ ಚಿತ್ರಿಸಿದರು. ಆತನ ಬಾಲವನ್ನೇ ಸುತ್ತಿ ಅವನಿಗೆ ಕಿರೀಟವನ್ನಾಗಿ ಮಾಡಿದರು. ಯಂತ್ರದ ಮಧ್ಯಭಾಗದಲ್ಲಿ ಕೋಟಿ ಮಂತ್ರಗಳನ್ನು ತುಂಬಿದ್ದರು. ಆಗ ಸ್ವಾಮಿ ಅಲ್ಲಾಡದೆ ಭದ್ರವಾಗಿ ಕುಳಿತುಕೊಂಡ. ಹೀಗೆ ಚಕ್ರಾಬ್ಜ ಮಂಡಲದಲ್ಲಿರುವ ಹನುಮಂತನನ್ನು ಭಾರತದಲ್ಲಿ ಅಷ್ಟೇ ಅಲ್ಲ; ವಿಶ್ವದಲ್ಲಿಯೇ ಬೇರೆಲ್ಲಿಯೂ ನಾವು ಕಾಣಲಾರೆವು. ಈ ವಿಗ್ರಹದ ಪೂಜೆ ಮಹಾಮಂಗಳಕಾರಕ ಎಂದು ವ್ಯಾಸರಾಯರೇ ಒಂದು ಸೂತ್ರದಲ್ಲಿ ಹೇಳಿರುವುದುಂಟು.

ಶ್ರೀ ಆದ್ಯರಾಮಾಚಾರ್ಯ

(14ನೇ ಪುಟದಿಂದ)

ತ್ರಯ ಶಾಂತಿನಾಥ ಜಿನಾಲಯದ ಪೂಜೆಗಾಗಿ ಇವರಿಗೆ ಒಂದು ದತ್ತಿ ಕೊಡಲ್ಪಟ್ಟಿದೆ. ಮೂರನೆಯ ನರಸಿಂಹನ ಪ್ರತಿಸ್ಪರ್ಧಿಯಾದ ರಾಮನಾಥನು ಕೊಗಲಿ ಎಂಬಲ್ಲಿ ಚೆನ್ನ ಪಾರ್ಶ್ವನಾಥ ದೇವಾಲಯಕ್ಕೆ ಉದಾರದತ್ತಿಗಳನ್ನು ಬಿಟ್ಟಿದ್ದಾನೆ. ಹೊಯ್ಸಳರ ಅಧೀನರಾದ ಹೊಂಬುರ್ಚದ ಸಾಮಂತರಲ್ಲಿ ಒಬ್ಬನಾದ ಭುಜಬಲಸಾಂತರನು ತನ್ನ ಹೊಂಬುರ್ಚದಲ್ಲಿ ಒಂದು ಜೈನದೇವಾಲಯವನ್ನು ಕಟ್ಟಿಸಿ ಅದನ್ನು ತನ್ನ ಗುರುಗಳಾದ ಕನಕನಂದಿದೇವರಿಗೆ ಒಪ್ಪಿಸಿ ಒಂದು ಗ್ರಾಮವನ್ನು ಅದಕ್ಕೆ ದತ್ತಿಯಾಗಿ ಕೊಟ್ಟಿದ್ದಾನೆ. ವೀರ ಸಾಂತರನ ಮಂತ್ರಿಯಾದ ನಾಗಲರಸನು ಜೈನ ಧರ್ಮ ಪೋಷಕನಾಗಿದ್ದನು. ಅರಕಲಗೂಡಿನ ಕೊಂಗಾಳ್ವರೂ ಹುಣಸೂರಿನ ಚೆಂಗಾಳ್ವರೂ ಜೈನಧರ್ಮ ಪೋಷಕರಾಗಿದ್ದರು. ಶಾಸನಾಧಾರಗಳಿಂದ ಶ್ರವಣಬೆಳಗೊಳದಲ್ಲಿ ಅನೇಕ ಸಂಘಗಳೂ, ಗಣಗಳೂ, ಗಚ್ಛಗಳೂ, ಬಲಿಗಳೂ, ಶಾಖೆಗಳೂ ಇದ್ದವೆಂದು ತಿಳಿದುಬರುತ್ತವೆ.

ಕರ್ನಾಟಕವು ಜೈನಧರ್ಮದ ಮೂಲಕ ಪ್ರಪಂಚಕ್ಕೆ ಕೊಟ್ಟಿರುವ ಅಮೋಘವಾದ ಕೊಡುಗೆಯೆಂದರೆ ಜೈನ ವಿದ್ವಾಂಸರ ಸಂಸ್ಕೃತ, ಕನ್ನಡ, ಮತ್ತು ಪ್ರಾಕೃತ ಗ್ರಂಥಗಳು. ಜೈನಗ್ರಂಥಕಾರರಲ್ಲಿ ಕುಂದಕುಂದ, ಉಮಾಸ್ವಾತಿ, ಸಮಂತಭದ್ರ ಪೂಜ್ಯಪಾದ, ಅಕಲಂಕ, ಪ್ರಭಾಚಂದ್ರ, ಜಿನಸೇನ, ಗುಣಭದ್ರರನ್ನು ಹೆಸರಿಸಬಹುದು. ಕುಂದಕುಂದನು ೮೪ ಗ್ರಂಥಗಳನ್ನು, ರಚಿಸಿರುವಂತೆ ಪ್ರತೀತಿ. ಅವುಗಳಲ್ಲಿ 'ಪಂಚಾಸ್ತಿಕಾಯ ಪ್ರವಚನಸಾರ', 'ಸಮಯಸಾರ', 'ನಿಯಮಸಾರ', 'ರಯನಸಾರ', 'ಅಷ್ಟಪಾಹುಡ', 'ದ್ವಾದಶಾನು ಪ್ರೇಕ್ಷೆ' ಇವು ಮುಖ್ಯವಾದುವು. ಉಮಾಸ್ವಾತಿಯು 500 ಗ್ರಂಥಗಳನ್ನು ರಚಿಸಿರುವಂತೆ ಐತಿಹ್ಯವಿದೆ. ಅವುಗಳಲ್ಲಿ 'ತತ್ತ್ವಾಧಿಗಮಸೂತ್ರ', 'ತತ್ತ್ವಾಧಿಗಮಸೂತ್ರ ಭಾಷ್ಯ', 'ಪೂಜಾಪ್ರಕರಣ', 'ಜಂಬೂದ್ವೀಪ ಸಮಾಸ', 'ಪ್ರಶಮರತಿ' ಎಂಬವು ಮುಖ್ಯವಾದವು. ತತ್ತ್ವಾಧಿಗಮಸೂತ್ರಕ್ಕೆ ಸಮಂತಭದ್ರ, ಪೂಜ್ಯಪಾದ, ಅಕಲಂಕ, ವಿದ್ಯಾನಂದ, ಶುಕ್ರಸಾಗರ ಮೊದಲಾದ ಅನೇಕ ವಿದ್ವಾಂಸರು ವ್ಯಾಖ್ಯಾನವನ್ನು ರಚಿಸಿದ್ದಾರೆ. ಸಮಂತಭದ್ರನು ತತ್ತ್ವಾಧಿಗಮಸೂತ್ರಕ್ಕೆ ೮೪೦೦೦ ಶ್ಲೋಕ ಪರಿಮಿತಿಯುಳ್ಳ 'ಗಂಧಹಸ್ತಿಮಹಾಭಾಷ್ಯ' ವೆಂಬ ವ್ಯಾಖ್ಯಾನವನ್ನು ರಚಿಸಿದ್ದಾನೆ. ಈಗ ಅದು ಉಪಲಬ್ಧವಲ್ಲ. 'ರತ್ನಕರಂಡಕ ಶ್ರಾವಕಾಚಾರ' 'ಆಪ್ತಮೀಮಾಂಸಾ', 'ಜಿನಸ್ತುತಿ ಶತಕ', 'ಸ್ವಾಯಂಭುವಸೂತ್ರ' ಇವು ಇವನ ಉಪಲಬ್ಧ ಕೃತಿಗಳು. 'ಜೈನೇಂದ್ರವ್ಯಾಕರಣ' ಮತ್ತು 'ಕಲ್ಯಾಣಕಾರಕ' ವೆಂಬ ವೈದ್ಯ ಗ್ರಂಥವು ಪೂಜ್ಯಪಾದನ ಗ್ರಂಥಗಳು. ೧೨ ನೇಯ ಶತಮಾನದಲ್ಲಿ ಕಲ್ಯಾಣಕಾರಕವು ಜಗದ್ದಳ ಸೋಮನಾಥನಿಂದ ಕನ್ನಡಿಸಲ್ಪಟ್ಟಿದೆ. ಉಮಾಸ್ವಾತಿಯ 'ತತ್ತ್ವಾಧಿಗಮಸೂತ್ರ'ಕ್ಕೆ 'ಸರ್ವಾರ್ಥಸಿದ್ಧಿ'ಯೆಂಬ ೫೫೦೦ ಶ್ಲೋಕಗಳ ವ್ಯಾಖ್ಯಾನವನ್ನೂ ಉಪಾಸಕಾಚಾರ ವೆಂಬ ಮತ್ತೊಂದು ಗ್ರಂಥವನ್ನೂ ಪೂಜ್ಯಪಾದನು ರಚಿಸಿರುವನು. ಅಕಲಂಕದೇವನು ಉಚ್ಚತಾರ್ಕಿಕ, ರಾಷ್ಟ್ರಕೂಟ ರಾಜನಾದ ಶುಭತುಂಗದೇವನ ಮಗನೆಂಬ ಐತಿಹ್ಯವಿದೆ. ಈತನೂ ಉಮಾಸ್ವಾತಿಯ ತತ್ತ್ವಾಧಿಗಮಸೂತ್ರಕ್ಕೆ 'ತತ್ತ್ವಾರ್ಥವಾರ್ತಿಕ ವ್ಯಾಖ್ಯಾಲಂಕಾರ' ಎಂಬ ವ್ಯಾಖ್ಯಾನವನ್ನು ರಚಿಸಿದ್ದಾನೆ. ಪ್ರಭಾಚಂದ್ರ ಮುಂದಿನ ಜೈನಗ್ರಂಥಕಾರ. ಈತನು ನ್ಯಾಯಕುಮುದ ಚಂದ್ರೋದಯ, ಪ್ರಮೇಯ ಕಮಲಮಾರ್ತಾಂಡ ಜೈನೇಂದ್ರನ್ಯಾಸ, ಅಮೋಘವೃತ್ತಿನ್ಯಾಸ, ಎಂಬವುಗಳ ಕರ್ತೃ. 'ಪದ್ಮಪುರಾಣ' ವೆಂಬ ಹೆಸರಿನಲ್ಲಿ ರಾಮಾಯಣದ ಕಥೆಯನ್ನು ಬರೆದ ರವಿಷೇಣನು ಈ ಕಾಲದವನೇ. ನಾಗಚಂದ್ರನ ಕನ್ನಡದ 'ರಾಮಚಂದ್ರ ಚರಿತ ಪುರಾಣಕ್ಕೆ ಇದೇ ಮೂಲ. ರಾಷ್ಟ್ರಕೂಟ ರಾಜನಾದ ಅಮೋಘವರ್ಷನ ಕಾಲದವರು ಗುರು ಶಿಷ್ಯರಾದ ಜಿನಸೇನ ಗುಣಭದ್ರರು. ಇವರು ಕ್ರಮವಾಗಿ ಪೂರ್ವಪುರಾಣ ಉತ್ತರ ಪುರಾಣಗಳನ್ನೂ ರಚಿಸಿದ್ದಾರೆ. ಸೋಮದೇವನು ಜೈನ ವಿದ್ವಾಂಸರಲ್ಲಿ ಶ್ರೇಷ್ಠನಾದವನು. ರಾಷ್ಟ್ರಕೂಟ ಮೂರನೆಯ ಕೃಷ್ಣನ ಮಾಂಡಲಿಕ ನೇಮಿದೇವನ ಶಿಷ್ಯ. ತನ್ನನ್ನು ತಾರ್ಕಿಕ ಚಕ್ರವರ್ತಿ, ವಾದೀಭ ಪಂಚಾನನ, ಮೊದಲಾದ ಬಿರುದುಗಳಿಂದ ಸಂಬೋಧಿಸಿ ಕೊಂಡಿದ್ದಾನೆ. 'ಯಶಸ್ತಿಲಕ ಚಂಪು', 'ನೀತಿ ವಾಕ್ಯಾಮೃತ', 'ಷಣ್ಣವತೀ ಪ್ರಕರಣ', 'ಯುಕ್ತಿ ಚಿಂತಾಮಣಿ ಸೂತ್ರ' 'ಮಹೇಂದ್ರ ಮಾತಲಿ ಸಂಜಲ್ಪ' ಇವು ಇವನ ಗ್ರಂಥಗಳು.

ಕರ್ನಾಟಕದ ಜೈನರ ಪ್ರಾಕೃತ ಗ್ರಂಥರಾಶಿಯೂ ಅವರ ಸಂಸ್ಕೃತ ಗ್ರಂಥಗಳಷ್ಟೇ ಉನ್ನತವೂ ವಿಫುಲವೂ ಆಗಿವೆ. 'ಧವಳ', 'ಜಯಧವಳ' 'ಮಹಾಧವಳ'ಗಳು ಇವುಗಳಲ್ಲಿ ಪ್ರಖ್ಯಾತವಾದವು. ಇವುಗಳನ್ನು ಉಳಿಸಿ ಕಾಪಾಡಿಕೊಂಡು ಬಂದ ಕೀರ್ತಿ ಕರ್ನಾಟಕಕ್ಕೆ ಸಲ್ಲತಕ್ಕದ್ದಾಗಿದೆ. ಇವುಗಳ ಏಕಮೇವ ಪ್ರತಿಯು ಮೂಡಬಿದರೆಯ ಸಿದ್ಧಾಂತ ಬಸದಿಯಲ್ಲಿ ತಾಳೆಯೋಲೆಯ ಮೇಲೆ ಶಾಯಿಯಿಂದ ಹಳೆಗನ್ನಡಾಕ್ಷರಗಳಲ್ಲಿ ರಚಿತವಾಗಿ ಉಪಲಬ್ಧವಾಗಿದೆ. ಇದು 12 ನೆಯ ಶತಮಾನದ ಆದಿಕಾಲದ್ದು, ಷಟ್ಖಂಡಾಗಮಕ್ಕೆ ಸೇರಿದಂತೆ ಈಗ ಉಕ್ತವಾಗಿರುವ 'ಪೂರ್ವ' ಗ್ರಂಥಗಳಲ್ಲಿ ಉಳಿದಿರುವುದು ಇದು. ಕರ್ಮಸಿದ್ಧಾಂತದ ಬಹುವಿಸ್ತಾರವಾದ ವಿವರಣೆ ಇದರಲ್ಲಿದೆ. ಧರಸೇನನಿಗೆ ಈ ಸಿದ್ಧಾಂತದ ಸಂಪೂರ್ಣಜ್ಞಾನವಿದ್ದಿತು. ಕಾಥಿಯವಾಡದ ಪರ್ವತದಲ್ಲಿ ತಪಸ್ಸುಮಾಡುತ್ತಿದ್ದ ಅವನು ತನ್ನ ಅಂತ್ಯಕಾಲದಲ್ಲಿ ತನಗೆ ತಿಳಿದಿದ್ದನ್ನು ಪುಷ್ಪದಂತನಿಗೂ ಭೂತಬಲಿಗೂ ಉಪದೇಶಿಸಿದನು. ಅವರಿಬ್ಬರೂ ಕರ್ನಾಟಕದ ಬನವಾಸಿಗೆ ಬಂದು ಸೇರಿದರು. ಬೇರೊಂದು ಕಥೆಯ ಪ್ರಕಾರ ಅವರು ಇನ್ನೂ ಮುಂದೆ ನಡೆದು ತಮಿಳುನಾಡನ್ನು ತಲುಪಿದರು, ಪ್ರಾಕೃತ ಸಂಸ್ಕೃತ ವ್ಯಾಖ್ಯಾನಗಳು ಕರ್ನಾಟಕದಲ್ಲಿಯೂ ಅದರ ಸುತ್ತಮುತ್ತಲೂ ರಚಿತವಾದುವು. ಕುಂದಕುಂದ, ಶ್ಯಾಮಕುಂದ, ತುಂಬಲೂರ, ಸಮಂತಭದ್ರ, ಬಪ್ಪದೇವ ಮೊದಲಾದವರು ಇದಕ್ಕೆ ವ್ಯಾಖ್ಯಾನವನ್ನೂ ರಚಿಸಿದ್ದಾರೆ. ಇವೇ ಈಗ ಪ್ರತ್ಯೇಕವಾಗಿ ದೊರೆಯುತ್ತಿಲ್ಲ. ವೀರಸೇನನು ಕ್ರಿ. ಶ. ೮೧೬ ರಲ್ಲಿ ರಚಿಸಿ

---

(ಹಿಂದಿನ ಪುಟದಿಂದ)

ವ್ಯಾಸರಾಯರು ತಮ್ಮ ಜೀವಿತಕಾಲದಲ್ಲಿ ಏಳುನೂರು ಆಂಜನೇಯನನ್ನು ಪ್ರತಿಷ್ಠಾಪಿಸಿದರೆಂದು ಹೇಳುತ್ತಾರೆ. ಮುಳಬಾಗಿಲಿನ ನರಸಿಂಹ ತೀರ್ಥದಲ್ಲಿರುವ ಆಂಜನೇಯ ಅವರಲ್ಲಿ ದ್ವಿತೀಯ ಸ್ಥಾನ ಪಡೆದಿದ್ದಾನೆ. ಸಾಮಾನ್ಯವಾಗಿ ವ್ಯಾಸರಾಯರಿಂದ ಪ್ರತಿಷ್ಠಾಪಿತವಾದ ವಿಗ್ರಹಗಳಿಗೆ ಬಾಲದಲ್ಲಿ ಗಂಟೆ.ತಲೆಯಲ್ಲಿ ಜುಟ್ಟು ಹಾಗೂ ಕರ್ಣಕುಂಡಲಗಳು ಇರುತ್ತವೆ. ಚಕ್ರತೀರ್ಥದಲ್ಲಿರುವ ಯಂತ್ರೋದ್ಧಾರ ಪ್ರಾಣದೇವರನ್ನು ಇವರು ಕ್ರಿ.ಶ. 1500ರಲ್ಲಿ ಪ್ರತಿಷ್ಠಾಪಿಸಿದರು. ಮೊದಲು ಈ ವಿಗ್ರಹ ಬಯಲಿನಲ್ಲಿತ್ತು. ಅನಂತರ ಸಾಳ್ವ ಇಮ್ಮಡಿ ನರಸಿಂಹ ಈ ದೇವ ಮಂಟಪ ರಚಿಸಿದ. ಈ ದೇವನ ಪ್ರತಿಷ್ಠಾಪನಾಂತರವೇ ಕೃಷ್ಣದೇವರಾಯ ಪಟ್ಟಕ್ಕೆ ಬಂದ.

ಪೂಜೆಗೊಳ್ಳುತ್ತಿದ್ದಂತೆ ಸ್ವಾಮಿಗಳು ಬರೆದ ಬೀಜಾಕ್ಷರಗಳು, ಸುತ್ತಲಿನ ಕೋತಿಗಳು ಒಂದೊಂದಾಗಿ ಸ್ಪಷ್ಟರೀತಿಯಿಂದ ಕಾಣಲಾರಂಭಿಸಿದವು. ಇತ್ತೀಚೆಗೆ ಈ ವಿಗ್ರಹದ ಮುಂಭಾಗದಲ್ಲಿ ಹನುಮ, ಭೀಮ ಮಧ್ವ ಸಾಂಕೇತಿಕವೆಂದು ಬೇರೊಂದು ಚಿಕ್ಕ ವಿಗ್ರಹವನ್ನಿಡಲಾಗಿದೆ.

★

ಮುಗಿಸಿದ ಧವಳ ವ್ಯಾಖ್ಯಾನದಲ್ಲಿ ಅಡಕವಾಗಿರಬೇಕು. ಅದು ಸ್ವಲ್ಪಭಾಗ ಸಂಸ್ಕೃತದಲ್ಲಿಯೂ ಸ್ವಲ್ಪಭಾಗ ಪ್ರಾಕೃತದಲ್ಲಿಯೂ ಇದೆ. ೭೨೦೦೦ ಶ್ಲೋಕ ಪರಿಮಿತಿಯನ್ನುಳ್ಳದ್ದಾಗಿದೆ. ೫ ಖಂಡಗಳಿವೆ. ೬ ನೆಯ ಖಂಡವು 'ಮಹಾಬಂಧ' ಅಥವಾ 'ಮಹಾಧವಳ' ಎನ್ನಿಸಿಕೊಂಡಿದೆ. ಹಾಗೆಯೇ ಗಣಧರನೂ ಅಂಗಶಾಸ್ತ್ರಜ್ಞಾನವನ್ನು ಪರಂಪರೆಯಿಂದ ಪಡೆದಿದ್ದನು. ಅದರ ಆಧಾರದ ಮೇಲೆ 'ಕಷಾಯಪ್ರಾಭೃತ'ದ ಸೂತ್ರಗಳನ್ನೂ ಪ್ರಾಕೃತದಲ್ಲಿ ರಚಿಸಿದನು. ಆರ್ಯ ಮುಮುಕ್ಷು, ನಾಗಹಸ್ತಿ, ಯತಿವೃಷಭ – ಈ ಮೂವರೂ ಅದಕ್ಕೆ ಪ್ರಾಕೃತದಲ್ಲಿ ಟಿಪ್ಪಣಿಯನ್ನು ಬರೆದರು. ಪ್ರಾಯಶಃ ಈ ಸಾಮಾಗ್ರಿಯನ್ನು ಉಪಯೋಗಿಸಿಕೊಂಡು ವೀರಸೇನನು ಜಯಧವಳ ವ್ಯಾಖ್ಯಾನವನ್ನು ರಚಿಸಿರಬೇಕು.

ದಕ್ಷಿಣದ ಜೈನ ಗ್ರಂಥಕಾರರಲ್ಲಿ ಕುಂದಕುಂದ ಸುಪ್ರಸಿದ್ಧನಾದವನು. ಅವನ ಉಕ್ತಿಯ ಪ್ರಕಾರ ಅವನು ಭದ್ರಬಾಹುವಿನ ಶಿಷ್ಯ. ತಮಿಳು ಕನ್ನಡ ದೇಶದವನು. ಅವನ ಗ್ರಂಥಗಳು ಕನ್ನಡ ದೇಶದಲ್ಲಿ ಹೆಚ್ಚು ಪ್ರಿಯವಾಗಿವೆ. ಅವನು ಧರಸೇನನ ನಂತರ ಕ್ರಿ. ಶ. ದ ಆದಿಯಲ್ಲಿದ್ದವನು. ಈಗ ಉಪಲಬ್ಧವಾದ ಕುಂದಕುಂದನ ಎಲ್ಲ ಗ್ರಂಥಗಳೂ ಪ್ರಾಕೃತದಲ್ಲಿವೆ– ಶೌರಸೇನೀ ಪ್ರಾಕೃತದಲ್ಲಿವೆ. ಹಿಂದೆಯೇ ತಿಳಿಸಿರುವಂತೆ ಅವನ ಗ್ರಂಥಗಳಲ್ಲಿ 'ಪಂಚಾಸ್ತಿಕಾಯ' ಮೋಕ್ಷಸಾಧನ ಮಾರ್ಗವನ್ನು ತಿಳಿಸುತ್ತದೆ. 'ಪ್ರವಚನಸಾರ' ಶ್ರಮಣರಿಗೆ ಅವಶ್ಯಕವಾದ ಜ್ಞಾನ, ಜ್ಞೇಯ, ಆಚರಣೆಗಳನ್ನು ವಿಶದವಾಗಿ ನಿರೂಪಿಸುತ್ತದೆ. ಆತ್ಮದ ವಿಷಯಕವಾದ ವಾಸ್ತವಿಕ ವಿವೇಚನೆ 'ಸಮಯಸಾರ'. ಅವನ ಇತರ ಗ್ರಂಥಗಳು ಜೈನಧರ್ಮದ ವಿವಿಧ ಮುಖದ ಕೈಪಿಡಿಗಳು. ಪಟ್ಟಕೇರನ ಮೂಲಾಚಾರವೂ ಶಿವಾರ್ಯನ ಭಗವತ್ ಆರಾಧನವೂ ಕರ್ನಾಟಕದಲ್ಲಿ ರಚಿತವಾದುದೆಂದು ನಿಶ್ಚಯಿಸಲಾರದವಾಗಿದ್ದರೂ ದಕ್ಷಿಣ ದೇಶದವು. ಸರ್ವನಂದಿಯ 'ಲೋಕವಿಭಾಗ' ಯತಿವೃಷಭನ 'ತಿಲೋಕ ಪನ್ನತ್ತಿ' ಕರ್ನಾಟಕದಲ್ಲಿಯೇ ರಚಿತವಾಗಿರಬಹುದು. ಸಿದ್ಧಾಂತಗಳ ಸಾರಸಂಗ್ರಹವಾದ ಚಾವುಂಡರಾಯನಿಂದ ರಚಿತವಾದ ಗೊಮ್ಮಟಸಾರವು ಜೀವಕಾಂಡ ಮತ್ತು ಕರ್ಮಕಾಂಡಗಳೆಂಬ ಎರಡು ಭಾಗಗಳಾಗಿವೆ. ಇವುಗಳಿಂದ ಸಿದ್ಧಾಂತ ಗ್ರಂಥಗಳ ಅಧ್ಯಯನವು ಕರ್ನಾಟಕದಲ್ಲಿ ಜೀವಂತವಾಗಿ ಉಳಿಯಿತು. ಚಾವುಂಡರಾಯನಿಂದ ಮುಂದೆ ಬಂದವನು ಪುಷ್ಪದಂತ. ಇವನು ಕರ್ನಾಟಕದವನಲ್ಲದಿದ್ದರೂ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಸಾಮಂತರಾದ ಭರತ ಮತ್ತು ನನ್ನರ ಆಶ್ರಯದಲ್ಲಿ ಮಾನ್ಯಖೇಟದಲ್ಲಿ ನೆಲೆಸಿದ್ದವನು. 'ಮಹಾಪುರಾಣ', 'ನಯನಕುಮಾರಚರಿಯು' ಮತ್ತು 'ಜನಹರ ಚರಿಯು' ಎಂಬ ಮೂರು ಪ್ರಾಕೃತ ಗ್ರಂಥಗಳನ್ನು ರಚಿಸಿದನು. ಮೊದಲನೆಯದು ೬೩ ಶಲಾಕಾ ಪುರುಷರ ಚರಿತ್ರೆ, ೨–೩ ನೆಯವು ನಾಗಕುಮಾರ ಚರಿತ್ರೆ ಮತ್ತು ಯಶೋಧರ ಚರಿತ್ರೆಗಳು. ಇದೇ ಸಂಪ್ರದಾಯದಲ್ಲಿ ಸ್ವಯಂಭು, ಕನಕಾಮ, ತ್ರಿವಿಕ್ರಮ ಮತ್ತು ಹೇಮಚಂದ್ರರು ಪ್ರಾಕೃತದಲ್ಲಿ ವ್ಯಾಕರಣ, ಛಂದಸ್ಸು, ಮೊದಲಾದುವುಗಳಿಗೆ ಸಂಬಂಧಪಟ್ಟ ಶಾಸ್ತ್ರಗ್ರಂಥಗಳನ್ನು ರಚಿಸಿದ್ದಾರೆ. ಇವರಲ್ಲಿ ಅನೇಕರು ಕರ್ನಾಟಕ್ಕೆ ನೇರಸಂಬಂಧಪಟ್ಟವರಾಗಿದ್ದಾರೆ.

ಕನ್ನಡದಲ್ಲಿ ಗ್ರಂಥರಚನೆ ಮಾಡಿರುವವರನೇಕರು ಇರುವರು. ಕವಿಪರಮೇಷ್ಠಿಗೆ ಅವರಲ್ಲಿ ಅಗ್ರಸ್ಥಾನ. ಮುಂದೆ ಶ್ರೀವರ್ಧದೇವ, ದುರ್ವಿನೀತ, ರವಿಕೀರ್ತಿ, ಅಮೋಘವರ್ಷ, ಗುಣವರ್ಮ, ಪಂಪ, ಪೊನ್ನ, ರನ್ನಾದಿಗಳು ಕನ್ನಡ ಸಾಹಿತ್ಯ ಕ್ಷೇತ್ರವನ್ನು ಸುಪುಷ್ಟವನ್ನಾಗಿ ಮಾಡಿದ್ದಾರೆ.

ಹೊಯ್ಸಳರ ಕಾಲದಿಂದೀಚೆಗೂ ಕರ್ನಾಟಕದಲ್ಲಿ ಜೈನರಿಗೆ ಸೂಕ್ತ ಆಶ್ರಯ ದೊರೆತಿದೆ. ವಿಜಯನಗರದವರೂ ಮೈಸೂರು ಒಡೆಯರೂ ಅವರ ಧರ್ಮಕ್ಕೆ ಮಾನ್ಯತೆಯನ್ನಿತ್ತಿದ್ದಾರೆ. ಜೈನರು ತಮ್ಮ ಸೌಜನ್ಯ ಸೌಶೀಲ್ಯಗಳಿಂದ ಕರ್ನಾಟಕದ ಇತರ ಧರ್ಮೀಯರೊಂದಿಗೆ ಸಹಬಾಳ್ವೆಯನ್ನು ನಡೆಸಿ ಹುಂಬುಚ ಮೊದಲಾದೆಡೆಗಳಲ್ಲಿ ತಮ್ಮ ಕೇಂದ್ರಗಳನ್ನು ಉಳಿಸಿಕೊಂಡು ಇಂದಿನ ಸಮಾಜದ ಜೀವಂತಭಾಗಿಗಳಾಗಿ ಬೆಳೆದು ಬರುತ್ತಿದ್ದಾರೆ ಅವರ ಉಚ್ಛ್ರಾಯದ ಕಾಲದಲ್ಲಿ ಸ್ಥಾಪಿತವಾದ ಶ್ರವಣಬೆಳಗೊಳ, ಕಾರ್ಕಳ ಮತ್ತು ವೇಣೂರುಗಳಲ್ಲಿರುವ ಗೊಮ್ಮಟ ವಿಗ್ರಹಗಳೂ ಕಾರ್ಲೆ, ಅಜಂತ, ಎಲ್ಲೋರ ಮತ್ತು ಬಾದಾಮಿಗಳಲ್ಲಿರುವ ಆಶ್ಚರ್ಯಕರವಾದ ಕಲಾಶೇಷಗಳೂ ಹತ್ತನೆಯ ಶತಮಾನದಲ್ಲಿ ರಚಿತವಾದ ವೀರರಸ ಪ್ರಧಾನವಾದ ಕನ್ನಡ ಗ್ರಂಥಗಳೂ ಕರ್ನಾಟಕದಲ್ಲಿ ಚಿರಸ್ಮರಣೀಯವಾಗಿವೆ. ಕರ್ನಾಟಕದ ಧಾರ್ಮಿಕ ಪ್ರಪಂಚದಲ್ಲಿ ಜೈನಧರ್ಮಕ್ಕೆ ಪ್ರತ್ಯೇಕವಾದ ಸ್ಥಾನವಿದೆ.






### ಸ್ತೋತ್ರ ಮಂಜರಿ - ಭಾಗ - ೪

ಸಂಗ್ರಹಕರು : ಟಿ. ನಾರಾಯಣಶಾಸ್ತ್ರಿ

### ಶ್ರೀ ದತ್ತಾತ್ರೇಯ ಅವತಾರ ಲೀಲಾವಿಲಾಸ ಚರಿತ್ರೆ

ಲೇಖಕರು : ಪ್ರಸನ್ನ ಶ್ರೀನಿವಾಸ ದಾಸ

ಪುಟಗಳು : 26    ಬೆಲೆ : 2-00

# ಭಕ್ತರನ್ನು ರಂಜಿಸುವ ಎರಡು ಪುಟ್ಟ ಕೃತಿಗಳು

## ಸ್ತೋತ್ರ ಮಂಜರಿ - ಭಾಗ - ೪

ಶ್ರೀ ಟಿ. ನಾರಾಯಣಶಾಸ್ತ್ರಿಗಳು, 1981ರಲ್ಲಿ ಸಂಗ್ರಹಿಸಿ, ಪ್ರಕಟಿಸಿ, ಭಕ್ತಮಹಾಶಯರಿಗೆ ಉಚಿತವಾಗಿ ಹಂಚಿದ ಸ್ತೋತ್ರಮಂಜರಿ (ಭಾಗ ೪) "ಸನಾತನಧರ್ಮದ, ಆರ್ಷೇಯ ಸಂಸ್ಕೃತಿಯ ದಿವ್ಯಭವ್ಯವಾದ ಸ್ತೋತ್ರಗ್ರಂಥಗಳು ಈಗಿನ ಕಾಲದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಉತ್ತಮವಾದ ಗುಣ ಮಟ್ಟದಿಂದ ಕೂಡಿ ದೊರೆಯುತ್ತಿಲ್ಲ. ಅದಕ್ಕಾಗಿ ಅಪಾರವಾದ ಸ್ತೋತ್ರಗ್ರಂಥ ಸಾಗರದಿಂದ ಕೆಲವು ಬಿಂದುಗಳನ್ನಾಯ್ದು ಇಲ್ಲಿ ಪ್ರಕಟಿಸುವ ಸಾಹಸವನ್ನು ಕೈಗೊಳ್ಳಲಾಗಿದೆ" (ಆರಂಭದ ಮಾತುಗಳು) ಎನ್ನುವ ನಾರಾಯಣ ಶಾಸ್ತ್ರಿಗಳ ಮಾತು, ಭಾರತೀಯ ಧರ್ಮ ಸಂಸ್ಕೃತಿಗಳತ್ತ ತುಂಬ ಕಳಕಳಿಯುಳ್ಳದ್ದಾಗಿದೆ. ಪುಸ್ತಕ ಪ್ರಕಟಣೆಯ ಯಾವ ಐಹಿಕ ಲಾಭದ ಆಕಾಂಕ್ಷೆಯೂ ಅವರಿಗಿಲ್ಲ.

ಈ ಮಂಜರಿಯಲ್ಲಿ ವಿವಿಧಕಡೆಗಳಿಂದ ಆಯ್ದುಕೊಂಡ ೧೧೮ ಸ್ತೋತ್ರಗಳಿವೆ. ಭಗವನ್ಮಹಿಮೆಯನ್ನು ಸುಶ್ರಾವ್ಯವಾಗಿ ಹಾಡಿ, ಭಗವದ್ಭಕ್ತಿಯನ್ನು ಭಗವತ್ಪಾದಾರವಿಂದಗಳಲ್ಲಿ ಕೇಂದ್ರೀಕರಿಸಲು ಸಾಧ್ಯವಾಗುವ ಮಧುರ ಮನೋಹರ ಸ್ತೋತ್ರಗಳು ಇಲ್ಲಿವೆ. ಸಂಸ್ಕೃತ ತಿಳಿಯದವರಿಗಾಗಿ ಕನ್ನಡ ಲಿಪಿಯಲ್ಲಿ ಮುದ್ರಿಸಿ ಪ್ರಕಟಿಸಿದ ಈ ಕೃತಿ ಭಕ್ತರಿಗೆ ಒಂದು ಕೈದೀವಿಗೆ. "ನೆನೆವಲ್ಲಿ ನಾನಿರುವೆ", "ಮದ್ಭಕ್ತಾಃ ಯತ್ರಗಾಯಂತಿ ತತ್ರ 'ಯಜ್ಞಾನಾಂ ಜಪಯಜ್ಞೋsಸ್ಮಿ' ಎನ್ನುವುದು ಪರಮಾತ್ಮನ ನುಡಿ. ಹೀಗೆ ನಾಮಸಂಕೀರ್ತನೆಗೆ ಆತ್ಮಸಂತುಷ್ಟಿಗೆ, ಪಾಪಲೇಪದ ಪರಿಮಾರ್ಜನಕ್ಕೆ ತಕ್ಕುದಾದ ಸ್ತೋತ್ರಗಳು "ಕಸ್ಯನ ತುಷ್ಟಯೇ ?" ಸಮಯಾಸಮಯ, ಮಡಿ ಮೈಲಿಗೆ, ಸ್ತ್ರೀ ಶೂದ್ರಾದಿ ಯಾವ ಭೇದಗಳೂ ಇಲ್ಲದೆ, ಮುಕ್ತ ಮನಸ್ಸಿನಿಂದ ಹರಿಪಾರಮ್ಯವನ್ನು ಹಾಡಿ ಪಾಡಿ ನಲಿದಾಡಲು ಇಲ್ಲಿ ಅವಕಾಶವಿದೆ. ಅಂತೆಯೇ ಹರ, ಗಣಪತಿ, ದುರ್ಗ, ಲಕ್ಷ್ಮಿ, ಹನೂಮಾನ್, ಸುಬ್ರಹ್ಮಣ್ಯ, ಗ್ರಹಗಳು, ವಿಷ್ಣು ಸಹಸ್ರನಾಮ, ಕವಚಗಳು, ಅಷ್ಟ, ದಶ, ಶತ, ಸಹಸ್ರನಾಮಗಳ ಸ್ತೋತ್ರಗಳು— ಹೀಗೆ ವೈವಿಧ್ಯರಮಣೀಯವಾಗಿ ಈ 'ಸ್ತೋತ್ರಮಂಜರಿ' ಇದೆ. ಬಹುಶಃ ಹಿಂದಿನ ಮೂರು ಸ್ತೋತ್ರಮಂಜರಿಗಳ ಮುಂದಿನ ಭಾಗವಾಗಿ ಇದು ಪ್ರಕಟವಾಗಿದೆ. ಸಂಸ್ಕೃತದಲ್ಲಿರುವ "ಬೃಹತ್ ಸ್ತೋತ್ರ ರತ್ನಾಕರ"ದಂತೆ ಕನ್ನಡದಲ್ಲಿರುವ ಈ ಸ್ತೋತ್ರಮಂಜರಿಯ ಭಾಗಗಳು ಭಕ್ತಾನುಗ್ರಹ ಕಾಂಕ್ಷೆಯಿಂದ ಪ್ರಕಟಿಸಿ ಉಚಿತವಾಗಿ ಹಂಚಲ್ಪಟ್ಟಿವೆ. ಸಹೃದಯರು ಸಂಗ್ರಹಿಸಿ ಪ್ರಕಟಿಸಿದ ಶಾಸ್ತ್ರಿಗಳಿಗೆ ಋಣಿಗಳಾಗಿರಬೇಕು. ಸದಾ ಪಠನೀಯವಾದ ಚೊಕ್ಕ ಕೃತಿ.

## ಶ್ರೀ ದತ್ತಾತ್ರೇಯ ಅವತಾರ ಲೀಲಾವಿಲಾಸ ಚರಿತ್ರೆ

ಈ ಚಿಕ್ಕಕೃತಿಯನ್ನು "ಗೀರ್ವಾಣ ಛಂದಸ್ಸು ಅಷ್ಟಿಯಲಿ" ಬರೆದೆನೆಂದು ಕೃತಿಕಾರರಾದ ಶ್ರೀ ಪ್ರಸನ್ನ ಶ್ರೀನಿವಾಸದಾಸಾರ್ಯರು (I-೧೧) ಹೇಳಿಕೊಂಡಿದ್ದಾರೆ. ಕನ್ನಡದಲ್ಲಿ ಬರೆದ ಈ ಕೃತಿಗೆ ಸಂಸ್ಕೃತದ ಅಷ್ಟಿಛಂದಸ್ಸನ್ನು ಬಳಸಿಕೊಂಡದ್ದು ಈ ಕೃತಿಯ ವೈಶಿಷ್ಟ್ಯ. (ಪ್ರತಿಪಾದದಲ್ಲೂ 16 ಅಕ್ಷರಗಳಿರುವುದು. ಅಂತೆಯೇ ಈ ಅಷ್ಟಿಯಲ್ಲಿ 65,536 ಭೇದಗಳು ಬರುವುದು ಸಾಧ್ಯ.) ಸಂಸ್ಕೃತದಲ್ಲೂ ಇದು ಋಷಭಗಜವಿಲಸಿತ, ಬಾಣಿನಿ ಮುಂತಾದ ಅಪೂರ್ವ ರೀತಿಯಲ್ಲಿ ಪ್ರಯೋಗಿಸಲ್ಪಟ್ಟಿದೆ. ಒಳ್ಳೆಯ ಗೇಯತೆ, ದಿರುವುದು ದೊಡ್ಡ ಕೊರತೆಯೇ ಸರಿ.

ಕನ್ನಡದಲ್ಲಿ ಮಾಧ್ವಮತದ ಅಚ್ಚುಕಟ್ಟಿನಲ್ಲಿ ಬೆಳೆದುಬಂದ ದಾಸಸಾಹಿತ್ಯ ಸಂಗೀತ-ಸಾಹಿತ್ಯಗಳ ಮಧುರ ಬೆಸುಗೆಯುಳ್ಳದ್ದು. ಹರಿಭಕ್ತಿಯನ್ನು ಉದ್ಬುದ್ಧಗೊಳಿಸಲು, ಅಂತೆಯೆ "ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ ಕುಳಿತು ಪಾಡಲು ನಿಲುವ, ನಿಂತರೆ ನಲಿವ, ನಲಿದರೆ ಒಲಿವ ಸುಲಭನಾದ" ಹರಿಯನ್ನು ಒಲಿಸಲು, ನವ ವಿಧ ಭಕ್ತಿಗಳಿಂದ, "ಹಾಡಿದರೆ ಎನ್ನೊಡೆಯನ ಹಾಡುವೆ" ಎಂಬ ಅಚಲ ನಿಷ್ಠೆಯನ್ನು ಸಮಾವೇಶಗೊಳಿಸಲು, ತಕ್ಕುದಾದ ಲಲಿತ ಮಧುರ ಕೋಮಲವಾದ ಭಾಗವತ ಸಾಹಿತ್ಯವೇ ದಾಸಸಾಹಿತ್ಯ. ಮೇಲೆ ತಿಳಿಸಿದ ಚಿಕ್ಕ ಕೃತಿಯಲ್ಲಿ ಮೂರು ಅಧ್ಯಾಯಗಳಿವೆ. "ಈ ಗ್ರಂಥದಲಿ ಭಾಗವತವು, ಮಾರ್ಕಂಡೇಯವು, ಭಾಗವತರಿಗೆ ಉಪಾಸನಾಹೇತು ಪಂಚರಾತ್ರ ಆಗಮವು, ಒಳಕೊಂಡ ವಿಷಯಗಳು ಇವೆ." (1-12) ಪಾತಿವ್ರತ್ಯದ ಮಹಾತ್ಮೆಯನ್ನು ಮೊದಲನೆಯ ಅಧ್ಯಾಯದಲ್ಲಿ ಲಲಿತವಾಗಿ ವಿವರಿಸಲಾಗಿದೆ. ಎರಡನೆಯ ಅಧ್ಯಾಯವು ತ್ರಿಮೂರ್ತಿರೂಪನಾದ ದತ್ತಾತ್ರೇಯನ ಜನ್ಮವೃತ್ತಾಂತವನ್ನು ತಿಳಿಸುತ್ತದೆ. ಮೂರನೆಯ ಅಧ್ಯಾಯದಲ್ಲಿ ಸಂಪತ್ ಲಕ್ಷ್ಮೀವೃತ್ತಾಂತವಿದೆ. ಭಗವದ್ಭಕ್ತರಿಗೆ "ಅಕಳಂಕ ಮನಃಕಾಯ ಶುದ್ಧಿಯಿಂ ಪಠನೀಯ" ವಾಗಿದೆ ಈ ಗ್ರಂಥ. ಲಲಿತವಹ ಕನ್ನಡದ ನುಡಿಯಲಿ ಭಾರತೀಯ ಸಂಸ್ಕೃತಿಯ ಸಾರಗಳಾದ ಪಾತಿವ್ರತ್ಯ ಮಹಾತ್ಮೆ, ಭಗವದವತಾರ ಲೀಲಾವರ್ಣನೆ ಸಂಪಲ್ಲಕ್ಷ್ಮ್ಯುಪಾಸನೆಗಳು ಇಲ್ಲಿ ಮನೋಜ್ಞವಾಗಿ ನಿರೂಪಿತವಾಗಿವೆ. ಕೊರತೆಯೆಂದರೆ ಅಚ್ಚಿನ ದೋಷಗಳದ್ದು. ಅಂತೆಯೆ 26 ಪುಟಗಳ ಪುಟ್ಟ ಕೃತಿಗೆ ಕ್ರಯ ರೂ. ಎರಡು ಹೆಚ್ಚಾಯಿತೇನೋ ?

- ಕೆ. ಸುಬ್ರಹ್ಮಣ್ಯ ಭಟ್ಟ

# ಮಾದಾರ ಚೆನ್ನಯ್ಯ

ಶಿವಶರಣರಲ್ಲಿ ಅತ್ಯಂತ ಪ್ರಖ್ಯಾತನಾದವನೆಂದರೆ ಮಾದಾರ ಚೆನ್ನಯ್ಯನೆಂಬವನು. ಬಸವಣ್ಣ ತನ್ನ ವಚನಗಳಲ್ಲಿ ಇವನನ್ನು ಆಗಿಂದಾಗ್ಗೆ ಸ್ಮರಿಸುತ್ತಾನೆ. ಚೆನ್ನಯ್ಯನು ಬಸವೇಶ್ವರನಿಗಿಂತಲೂ ಸ್ವಲ್ಪ ಕಾಲದ ಹಿಂದಿನವನೆಂದು ಇದರಿಂದ ತಿಳಿದು ಬರುತ್ತದೆ. ಇವನನ್ನು ಸ್ಮರಿಸದ ವೀರಶೈವ ಕವಿಗಳಾಗಲೀ ವಚನಕಾರರಾಗಲೀ ವಿರಳ. ವೀರಶೈವ ಗ್ರಂಥಗಳಲ್ಲಿ ಚೆನ್ನಯ್ಯನ ಬಗ್ಗೆ ಪೂಜ್ಯಭಾವನೆ ತಳೆದಿದ್ದಾರೆ. ಮಾದಾರ ಚೆನ್ನಯ್ಯನು ತಮಿಳು ದೇಶದ ಕಾಂಚೀ ಪಟ್ಟಣದಲ್ಲಿ ಪ್ರಸಿದ್ಧಿಗೆ ಬಂದವನಾಗಿದ್ದನು. ಇವನು ಕನ್ನಡ ಭಾಷೆಯಲ್ಲಿ ವಚನಗಳನ್ನು ರಚಿಸಿರುವನು. ಇದರಿಂದ ಇವನು ಕನ್ನಡ ನಾಡಿನವನಾಗಿದ್ದು ಅನಂತರ ಅಲ್ಲಿಗೆ ಹೋಗಿ ನೆಲಸಿರಬಹುದೆಂದು ಕಂಡು ಬರುತ್ತದೆ.

ಚೆನ್ನಯ್ಯನು ಕಾಂಚಿಪಟ್ಟಣದಲ್ಲಿದ್ದಾಗ ಚೋಳ ರಾಜ್ಯವನ್ನು ಪ್ರಖ್ಯಾತನಾದ ಕರಿಕಾಲಚೋಳನೆಂಬವನು ಆಳುತ್ತಿದ್ದನು. ಈತನು ಕ್ರಿ. ಶ. 1070 ರಿಂದ 1120 ವರೆಗೆ ಅತ್ಯಂತ ಘನತೆಯಿಂದ ರಾಜ್ಯವನ್ನಾಳಿದನು. ಕರಿಕಾಲನು ಶಿವಮತಾಭಿಮಾನಿಯಾಗಿದ್ದನು. ಇವನ ಕಾಲದಲ್ಲಿ ಕರ್ನಾಟಕ ರಾಜ್ಯಕ್ಕೂ ತಮಿಳುರಾಜ್ಯಕ್ಕೂ ನಿಕಟ ಸಂಬಂಧವಿದ್ದುದರಿಂದ ಕನ್ನಡಿಗರಾದ ಶಿವಶರಣರು ತಮಿಳು ದೇಶಕ್ಕೆ ಹೋಗಿ ನೆಲಸಿದರು. ಚೆನ್ನಯ್ಯನೂ ಇವರಂತೆ ತಮಿಳು ದೇಶಕ್ಕೆ ಹೋಗಿ ಅಲ್ಲಿ ಕಾಂಚೀ ಪಟ್ಟಣದಲ್ಲಿ ನೆಲಸಿರಬಹುದೆಂದು ಕಾಣುತ್ತದೆ,

ಮಾದಾರಚೆನ್ನಯ್ಯನು ಕರಿಕಾಲನ ಕೈಕೆಳಗೆ ಹುಲ್ಲುಕೊಯ್ಯುವ ಕಾಯಕವನ್ನು ಮಾಡಿ ತನ್ನ ಜೀವಿತದ ಪರಿಯನ್ನು ನಡೆಸುತ್ತಿದ್ದನು. ದಿನಾ ಹುಲ್ಲನ್ನು ಕೊಯ್ದು ರಾಜನ ಕುದುರೆ ಲಾಯಕ್ಕೆ ತಲುಪಿಸುತ್ತಿದ್ದ. ಮುಂದೆ ಹುಲ್ಲುಕೊಯ್ಯುವ ಅಲ್ಲಿಯ ಕಬಾಡಿಗರ ಒಡೆಯನೂ ಆದನು. ದಿನಾ ಕಬಾಡಿಗರನ್ನು ಜೊತೆಗೂಡಿಕೊಂಡು ಕಾಡಿಗೆ ಹೋಗಿ ಅವರಿಂದ ಹುಲ್ಲನ್ನು ಕೊಯ್ಯಿಸಿ, ಅದನ್ನು ಹೊರೆ ಮಾಡಿಸಿ, ರಾಜಧಾನಿಗೆ ತೆಗೆಸಿಕೊಂಡು ಬಂದು ಅರಸನ ಲಾಯದಲ್ಲಿ ಚೆಲ್ಲಿಸುತ್ತಿದ್ದನು.

ಚೆನ್ನಯ್ಯನು ಗುರುಕಾರುಣ್ಯವನ್ನು ಪಡೆದು ಇಷ್ಟಲಿಂಗಧಾರಿಯಾಗಿದ್ದನು. ಅವನು ಪ್ರಸಾದಿಸ್ಥಲವನ್ನು ಹೊಂದಿ ಎಲ್ಲವನ್ನೂ ಲಿಂಗಾರ್ಪಣೆ ಮಾಡಿ ಲಿಂಗ ಭೋಗೋಪಭೋಗಿಯಾಗಿ ಗುಪ್ತಭಕ್ತಿಯನ್ನು ಆಚರಿಸುತ್ತಿದ್ದನು.

ಚೆನ್ನಯ್ಯನು ತನ್ನ ಕಾಯಕವನ್ನು ಮಾಡಲೋಸುಗ ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಶಿವಾನುಭಾವದಲ್ಲಿಯ ಪ್ರಸಾದಿಯ ಆಚರಣೆಯಂತೆ ಆಚರಿಸುವನು. ಯಾವುದೇ ಸುಂದರ ವಸ್ತು ಅವನ ಕಣ್ಣಿಗೆ ಬಿದ್ದ ಕೂಡಲೇ ಅವುಗಳನ್ನು ಮೊದಲು ಶಿವಾರ್ಪಣೆ ಮಾಡಿಯೇ ತಾನು ಸ್ವೀಕರಿಸುತ್ತಿದ್ದನು. ಹೀಗೆ ಶಿವಾರ್ಪಣೆ ಮಾಡುತ್ತ ಕಾನನದ ಮಧ್ಯದಲ್ಲಿ ಪರಮಾತ್ಮನ ಧ್ಯಾನದಲ್ಲಿ ಸಂಚರಿಸುತ್ತ ತನ್ನ ಕಾಯಕವನ್ನು ಮಾಡುತ್ತಿದ್ದನು. ಕಾಯಕ ಮುಗಿದ ಮೇಲೆ ಅವನು ಯಾರಿಗೂ ತಿಳಿಯದಂತೆ ಏಕಾಂತ ಸ್ಥಳಕ್ಕೆ ಹೋಗಿ ಪರಮಾತ್ಮನ ಧ್ಯಾನದಲ್ಲಿ ಕೆಲ ಹೊತ್ತು ಕಳೆಯುತ್ತಿದ್ದನು. ಅಂತೆಯೇ ಸ್ವಲ್ಪ ಹೊತ್ತು ಧ್ಯಾನದಲ್ಲಿ ಕುಳಿತಿದ್ದು ನಂತರ ತನ್ನ ಸೆಜ್ಜೆಯಲ್ಲಿದ್ದ ಇಷ್ಟಲಿಂಗವನ್ನು ಭಕ್ತಿಯಿಂದ ಹೊರತೆಗೆದು ಅದಕ್ಕೆ ನಮಸ್ಕರಿಸಿ, ಲಿಂಗಪೂಜೆಯನ್ನು ಮಾಡುತ್ತಿದ್ದನು. ಆ ಮೇಲೆ ಅಲ್ಲಿದ್ದ ಫಲಪುಷ್ಪಗಳನ್ನು ಲಿಂಗಕ್ಕೆ ಅರ್ಪಿಸಿ ಪರಮಾತ್ಮನನ್ನು ಕೊಂಡಾಡುತ್ತ ಲಿಂಗಾರ್ಪಿತದಿಂದ ಪ್ರಸಾದ ಗ್ರಹಣ ಮಾಡುತ್ತಿದ್ದನು. ಆ ಮೇಲೆ ತನ್ನ ಮೊದಲಿನ ಸ್ಥಳಕ್ಕೆ ಹೋಗಿ ಅಲ್ಲಿ ಸಿದ್ಧವಾಗಿರಿಸಿದ್ದ ಹುಲ್ಲಿನ ಹೊರೆಯನ್ನು ಹೊರಿಸಿ ಕೊಂಡು ಚೋಳರಾಜನ ಲಾಯದಲ್ಲಿ ಸೇರಿಸುತ್ತಿದ್ದನು. ನಂತರ ತನ್ನ ಮನೆಗೆ ಹೋಗುತ್ತಿದ್ದನು.

ಮನೆಗೆ ಹೋದೊಡನೆ ಅವನ ಹೆಂಡತಿಯು ಅವನನ್ನು ಸಂತೋಷದಿಂದ ಆದರಿಸಿ ಉಪಚರಿಸುವಳು. ತನ್ನ ಮನೆಯಲ್ಲಿದ್ದ ಊಟದ ಪದಾರ್ಥಗಳನ್ನು ಪ್ರೀತಿಯಿಂದ ಉಣಬಡಿಸುತ್ತಿದ್ದಳು. ಚೆನ್ನಯ್ಯನು ಅಷ್ಟೇನೂ ಸ್ಥಿತಿವಂತನಲ್ಲ. ಆದರೂ ತನಗೆ ನೀಡಿದ ಪದಾರ್ಥಗಳು ಅಮೃತ ಸಮಾನವೆಂದು ಬಗೆದು ಮೊದಲು ಅವುಗಳನ್ನು ಶಿವನಿಗೆ ಅರ್ಪಿಸಿ ನಂತರ ಪ್ರಸಾದ ರೂಪವಾಗಿ ಸ್ವೀಕರಿಸುತ್ತಿದ್ದನು. ಈ ರೀತಿಯಾಗಿ ಗಂಡ ಹೆಂಡಿರು ತಮ್ಮ ಕಾಯಕವನ್ನು ನಡ

ಶುಕ್ಲ ಶೋಣಿತ ಮಜ್ಜೆ ಮಾಂಸ ಹಸಿವು ತೃಷೆ
ವ್ಯಸನ ವಿಷಯಾದಿಗಳೊಂದೆ ಭೇದ
ಮಾಡುವ ಕೃಷಿ ವ್ಯವಸಾಯ ಹಲವಲ್ಲದೆ
ತೋರು ತೋರಿಕೆ ಅರಿವಾತ್ಮನೊಂದೆ ಭೇದ
ಅವ ಕುಲವಾದಡೂ ಅರಿದಲ್ಲಿಯೇ ಪರತತ್ವಭಾವಿ
ಮರೆದಲ್ಲಿಯೇ ಮಲ ಮಾಯಾ ಸಂಬಂಧಿ
ಇಂತೀ ಉಭಯವನರಿದು ಮರೆಯಲಿಲ್ಲ
ಕೈ ಯುಳಿ ಕತ್ತಿ ಅಡೆಗುಂಟಕ್ಕಡಿಯಾಗಬೇಡ
ಅರಿ ನಿಜಾತ್ಮರಾಮ ರಾಮನಾ

—ಮಾದಾರ ಚೆನ್ನಯ್ಯ.

**ಜಯಶ್ರೀ ಜಿ. ಭಟ್**

ಸುತ್ತ ಶಿವ ಭಕ್ತಿಯನ್ನು ಅತ್ಯಂತ ಗೌಪ್ಯವಾಗಿ ಮಾಡುತ್ತ ಶಿವಾನುಭವಿಗಳಾಗಿ ಸಂತೋಷದಿಂದ ಕಾಲಕಳೆಯುತ್ತಿದ್ದರು. ಇವರ ಶಿವ ಭಕ್ತಿಯ ಕುರಿತು ಯಾರೂ ಅರಿತಿರಲಿಲ್ಲ. ಈ ರೀತಿಯಲ್ಲಿ ಚೆನ್ನಯ್ಯನು ತನ್ನ ಹೆಂಡತಿಯೊಡನೆ ಅರವತ್ತು ವರ್ಷಗಳವರೆಗೆ ಚೋಳ ರಾಜನ ರಾಜ್ಯದಲ್ಲಿ ಹುಲ್ಲಿನ ಕಾಯಕವನ್ನು ಮಾಡುತ್ತ ಜೀವಿಸುತ್ತಿದ್ದನು.

ಶಿವನು ಚೆನ್ನಯ್ಯನ ಉಜ್ವಲತರ ನಡೆಗೆ ಅತ್ಯಂತ ಸಂತುಷ್ಟನಾಗಿ ಇನ್ನು ಮೇಲೆ ಇವನ ಭಕ್ತಿಯನ್ನು ಜಗತ್ತಿನಲ್ಲಿ ಮೆರೆಯಿಸಬೇಕೆಂದು ಬಗೆದು ಒಂದು ಉಪಾಯವನ್ನು ಮಾಡಿದನು.

ಚೆನ್ನಯ್ಯನು ಎಂದಿನಂತೆ ತನ್ನ ಕಾಯಕವನ್ನು ಪೂರೈಸಿ ಮನೆಗೆ ಬಂದು ಪರಮಾತ್ಮನ ಧ್ಯಾನದಲ್ಲಿದ್ದನು. ಅವನ ಹೆಂಡತಿಗೆ ಅವನ ದೇಹಶ್ರಮವನ್ನು ಕಂಡು ಮನೆಯಲ್ಲಿ ಬೇರೇನೂ ಇಲ್ಲದ್ದರಿಂದ ತಿಳಿಗಿಸ ಅಂಬಲಿಯನ್ನು ತಯಾರು ಮಾಡಿ ಅವನ ಮುಂದಿಟ್ಟಳು. ಚೆನ್ನಯ್ಯನು ಅದನ್ನು ಕಂಡು ಲಿಂಗಾರ್ಪಿತ ಭಾವದಿಂದ ಸವಿಯ ಹತ್ತಿದನು. ಅವನಿಗೆ ಆಗ ಅದು ನಿತ್ಯದಕ್ಕಿಂತಲೂ ನೂರ್ಮಡಿ ಹೆಚ್ಚು ರುಚಿಯಾದಂತೆ ತೋರಿತು. ಅವನು ಆ ರುಚಿಯನ್ನು ತನ್ನ ಅಂತರ್ಲಿಂಗಕ್ಕೆ ಸಮರ್ಪಿಸಲು ಪರಮಾತ್ಮನೇ ಪ್ರತ್ಯಕ್ಷನಾಗಿ ತನ್ನೊಡನೆ ಉಣ್ಣುವಂತೆ ತೋರಿತು. ಇಬ್ಬರೂ ಆ ಅಂಬಲಿಯನ್ನು ಸವಿಯ ತೊಡಗಿದರು. ಹೀಗೆ ಚೆನ್ನಯ್ಯನು ಕುರಿದುಕೊಳ್ಳುವಾಗ ಶಿವ ಸಾನ್ನಿಧ್ಯದ ಸುಖದ ಅನುಭವವು ಅವನಿಗಾಯಿತು.

ಇತ್ತ ರಾಜನಾದ ಕರಿಕಾಲ ಚೋಳನು ಮರುದಿನ ಮುಂಜಾವಿನಲ್ಲಿ ಎಂದಿನಂತೆ ಶಿವಾಲಯಕ್ಕೆ ಹೋಗಿ ದೇವರ ದರ್ಶನವನ್ನು ಹೊಂದಿದನು. ಬಳಿಕ ಪರಮಾತ್ಮನನ್ನು ಒಲಿಸಿಕೊಂಡು ಪ್ರತ್ಯಕ್ಷ ದರ್ಶನ ಪಡೆಯಬೇಕೆಂಬ ಉತ್ಕಟೇಚ್ಛೆಯು ಅವನಿಗಾಯಿತು. ಅದಕ್ಕಾಗಿ ಸರ್ವತಯಾರಿಯನ್ನು ಮಾಡಿದನು. ಪೂಜಾಸಾಮಾಗ್ರಿಗಳನ್ನು ಅಪರಿಮಿತವಾಗಿ ಸಂಗ್ರಹಿಸಿದನು. ವಿಭೂತಿ ರುದ್ರಾಕ್ಷಿ ಮಾಲೆಯನ್ನು ಧರಿಸಿಕೊಂಡು ದೇವರಿಗರ್ಪಿಸಿ ಅತ್ಯಂತ ಭಕ್ತಿ ಭಾವದಿಂದ ಪೂಜಿಸುವವನಾದನು. ಬಹಳ ವೇಳೆ ಹೀಗೆ ಭಜಿಸಿದ ಬಳಿಕ ತಾನು ಸಿದ್ಧಪಡಿಸಿ ಇಟ್ಟುಕೊಂಡಿದ್ದ ಶಾಖಗಳನ್ನೂ, ಬೋನವನ್ನೂ, ಅನೇಕ ತರದ ಆಹಾರದ ಜಿನಸುಗಳನ್ನೂ, ನೂರಾರು ಬಂಗಾರದ ಹರಿವಾಣಗಳಲ್ಲಿ ತುಂಬಿಸಿ ಅವುಗಳನ್ನೆಲ್ಲ ದೇವರೆದುರಿಗೆ ಇಟ್ಟು ನಾನಾ ವಿಧವಾದ ವಾದ್ಯಘೋಷಗಳಲ್ಲಿ ಪರಮಾತ್ಮನನ್ನು ಬಹಳವಾಗಿ ಸುತ್ತಿಸಿದನು. ಆಗ ಅವನಲ್ಲಿ ಉಂಟಾದ ಭಕ್ತಿಯ ಉದ್ರೇಕಕ್ಕೆ ಪಾರವೇ ಇರಲಿಲ್ಲ. ಕೊನೆಗೆ ಅವನು ದೇವರನ್ನುದ್ದೇಶಿಸಿ, "ದೇವಾ ನಾನೀಗ ನಿನಗೋಸ್ಕರ ಅತ್ಯಂತ ರುಚಿಕರವಾದ ಪದಾರ್ಥಗಳನ್ನು ತಂದಿದ್ದೇನೆ. ಇದನ್ನು ನೀನು ಪ್ರತ್ಯಕ್ಷ ಸೇವಿಸು" ಎಂದು ಹೇಳಿ ಅವುಗಳನ್ನೆಲ್ಲಾ ದೇವರ ಮುಂದಿಟ್ಟು ಮುಂದಿನ ಪರದೆಯನ್ನು ಎಳೆದನು.

ಕರಿಕಾಲನು ದೇವರು ಉಣ್ಣುವ ಸಪ್ಪಳವನ್ನು ಕೇಳಬೇಕೆಂದು ಇಚ್ಛಿಸಿದನು. ಅಂತೆಯೇ ಆಲಿಸಲೋಸುಗ ಅಲ್ಲೇ ಹಿಂದೆ ನಿಂತು ಕೊಂಡನು. ಹೀಗೆ ಸ್ವಲ್ಪ ಹೊತ್ತಾದ ಮೇಲೆ ಮೇಲೆ ಮೆಲ್ಲನೆ ತೆರೆಯ ಮರೆಯಲ್ಲಿ

# ಕಪಿಲೇಶ್ವರಸ್ವಾಮಿ ದೇವಾಲಯ

## ತಿರುಪತಿ

ತಿರುಪತಿಯಿಂದ ತಿರುಮಲೆಗೆ ಹೊರಡುವ ಹಾದಿಯಲ್ಲಿ ತಿರುಪತಿಯ ಉತ್ತರ ಭಾಗದಲ್ಲಿ ಬೆಟ್ಟದ ತಪ್ಪಲಿನಲ್ಲಿರುವ ಸುಂದರ ಪ್ರಶಾಂತ ದೇವಾಲಯ. ಇಲ್ಲಿನ ದೊಡ್ಡ ಜಲಪಾತ ಮಳೆಗಾಲದಲ್ಲಿ ತುಂಬಿ ಧುಮುಕುವುದು. ಆಳ್ವಾರ್ ತೀರ್ಥವೆಂದೂ ಹೆಸರಿರುವ ಇಲ್ಲಿ ಕಪಿಲ ಮಹರ್ಷಿ ಪೂಜಿಸಿದ ಈಶ್ವರ ಲಿಂಗವಿದ್ದು ಸಕಲ ಹಿಂದೂಗಳನ್ನೂ ಏಕತ್ರ ಆಕರ್ಷಿಸುತ್ತದೆ. ತಿರುಪತಿಯಿಂದ ನಡೆದೂ ಹೋಗಬಹುದು. ಸ್ಥಳೀಯ ವಾಹನ ಸೌಕರ್ಯವೂ ಉಂಟು.

### ಆಲಯ ಕಾರ್ಯಕ್ರಮ ವಿವರ

| | |
|---|---|
| ಸುಪ್ರಭಾತ | ಬೆಳಗ್ಗೆ 5–00 ರಿಂದ 5–30 ವರೆಗೆ |
| ಸರ್ವದರ್ಶನ | ,, 5–30 ರಿಂದ 9–30 ವರೆಗೆ |
| ಅಭಿಷೇಕ | ,, 9–30 ರಿಂದ 10–30 ವರೆಗೆ |
| ಮೊದಲ ಬಲಿ, ಘಂಟೆ | ,, 10–30 ರಿಂದ 10–45 ವರೆಗೆ |
| ಸರ್ವದರ್ಶನ | ,, 10–45 ರಿಂದ 11–30 ವರೆಗೆ |
| ಎರಡನೇ ಬಲಿ, ಘಂಟೆ | ,, 11–30 ರಿಂದ 11–45 ವರೆಗೆ |
| ಸರ್ವದರ್ಶನ | 11–45 ರಿಂದ ಮಧ್ಯಾಹ್ನ 4–00 ವರೆಗೆ |
| ಅಭಿಷೇಕ (ಅರ್ಜಿತ) | ಮಧ್ಯಾಹ್ನ 4–00 ರಿಂದ 4–30 ವರೆಗೆ |
| ಅರ್ಚನೆ (ಅರ್ಜಿತ) | ,, 4–30 ರಿಂದ 5–30 ವರೆಗೆ |
| ರಾತ್ರಿ ಘಂಟೆ | ಸಂಜೆ 5–30 ರಿಂದ 5–45 ವರೆಗೆ |
| ಸರ್ವದರ್ಶನ | ,, 5–45 ರಿಂದ 6–00 ವರೆಗೆ |
| ದೀಪಾರಾಧನೆ | ,, 6–00 ರಿಂದ 6–30 ವರೆಗೆ |
| ಸರ್ವದರ್ಶನ | ,, 6–30 ರಿಂದ 7–30 ವರೆಗೆ |
| ಏಕಾಂತಸೇವೆ | ರಾತ್ರಿ 7–30 ರಿಂದ 8–00 ವರೆಗೆ |

ಅರ್ಜಿತಸೇವಾಕಾಲದಲ್ಲಿ ರೂ । 1–00 ಶುಲ್ಕದಿಂದ ಒಬ್ಬರು ದರ್ಶನಕ್ಕೆ ಅನುಮತಿಸಲ್ಪಡುವರು.

**ಪೇಷ್ಕಾರ್.**

ಇಣಿಕಿ ನೋಡಿದನು. ಆಹಾರ ಪದಾರ್ಥಗಳೆಲ್ಲವೂ ಇದ್ದಕ್ಕಿದ್ದ ಹಾಗೇ ಸ್ತಬ್ಧವಾಗಿದ್ದುವು. ಕರಿಕಾಲನು ತೆರೆಯನ್ನು ಸರಿದು ಚಿಂತಾಕ್ರಾಂತನಾದ ದನಿಯಿಂದ 'ಪರಮಾತ್ಮನೇ ನಾನು ಕೆಟ್ಟನು. ನನ್ನ ಸೇವೆಯು ನಿನಗೆ ಮುಟ್ಟದೇ ಹೋಯಿತು. ಇನ್ನು ಮೇಲೆ ನಾನು ಬದುಕಿರಲಾರನು' ಎಂದು ರೋದಿಸುತ್ತ ಒರೆಯಿಂದ ತನ್ನ ಕತ್ತಿಯನ್ನು ಹಿರಿದು ತನ್ನ ಕೊರಳನ್ನು ಕತ್ತರಿಸಿಕೊಳ್ಳುವಷ್ಟರಲ್ಲಿ ಪರಮಾತ್ಮನು ಅವನಿಗೆ ಪ್ರತ್ಯಕ್ಷನಾಗಿ "ಚೋಳನೇ ನಿನಗೆಷ್ಟು ಸ್ಮರಣೆ ಇಲ್ಲವಲ್ಲ, ನಾನು ಮಾದಾರ ಚೆನ್ನಯ್ಯನೊಡನೆ ಉಂಡಿದ್ದೇನೆ, ನನಗೆ ಹಸಿವಿಲ್ಲ, ಚೆನ್ನಯ್ಯನು ಸಿದ್ಧಪಡಿಸಿದ ಅಂಬಲಿಯ ರಚಿಯನ್ನು ನಿನಗೆ ನಾನೇನು ಹೇಳಲಿ! ಅಂತಹ ರುಚಿಯಾದ ಅಂಬಲಿಯು ಚೋಳಾದಿಗಳಿಗೆ ದೊರೆಯದು, ನೀನು ಮಾಡಿದ ದೇವಾನ್ನಗಳ ರುಚಿಯು ಅದಕ್ಕೆ ಏನೂ ಸರಿಬಾರದು" ಎಂದು ಹೇಳಿ ಆ ಲಿಂಗದಲ್ಲಿಯೇ ಅಡಗಿದನು.

ಪರಮಾತ್ಮನ ಈ ನುಡಿಗಳನ್ನು ಕೇಳಿ ಚೋಳರಾಜನು ವಿಸ್ಮಿತನಾದನು. ಪರಮಾತ್ಮನೊಡನೆ ಉಂಡ ಮಹಾತ್ಮನೊಬ್ಬನು ತನ್ನ ರಾಜ್ಯದಲ್ಲಿರುವನೆಂದು ಅವನಿಗೆ ಗೊತ್ತಾಯಿತು. ಅವನ ದರ್ಶನವನ್ನು ಅಗತ್ಯವಾಗಿ ಮಾಡಬೇಕೆಂದು ಬಲವಾದ ಇಚ್ಛೆಯುಂಟಾಯಿತು. ಅವನನ್ನೇ ಅರಸುತ್ತಾ ಹೊರಹೊರಟನು.

ಅವನು ಹೋಗುತ್ತಾ ಹೋಗುತ್ತಾ— 'ಚೆನ್ನಯ್ಯನೆಂಬ ಶಿವಶರಣನನ್ನು ನೀವು ಕಂಡಿರುವಿರೇ ಹೇಗೆ?, ಅವನು ಪರಮಾತ್ಮನೊಡನೆ ಉಂಡಿದ್ದಾನೆ, ಅಂತಹ ಶಿವಶರಣನನ್ನು ತೋರಿಸಿ ಎಂದು ಜನರಲ್ಲಿ ವಿಚಾರಿಸುತ್ತ ಹುಡುಕಾಡುತ್ತಿದ್ದನು. ಚಾರರನ್ನು ಸುತ್ತಲೂ ಕಳುಹಿಸಿದನು. ಚಾರರಲ್ಲಿ ಕೆಲವರು ಅಕಸ್ಮಾತ್ತಾಗಿ ಮಾದರಕೇರಿಯನ್ನು ಹೊಕ್ಕು, ಇಲ್ಲಿ ಚೆನ್ನಯ್ಯನೆಂಬವನು ಇದ್ದಾನೆಯೇ ಎಂದು ಕೇಳಿದರು. ಅಲ್ಲಿದ್ದವರು 'ಅವನು ಇದ್ದಾನೆ' ಎಂದು ಹೇಳಿ ಅವನ ಮನೆಯನ್ನು ತೋರಿಸಿದರು. ಚಾರರು ಚೆನ್ನಯ್ಯನ ಮನೆಯನ್ನು ಪ್ರವೇಶಿಸಿದರು. ಒಳಗೆ ಶಿವಭಕ್ತನಾದ ಚೆನ್ನಯ್ಯನಿರುವುದನ್ನು ಕಂಡರು. ಊರಿಗೆ ಹಿಂತಿರುಗಿದವರೇ ರಾಜನೊಡನೆ ಚೆನ್ನಯ್ಯನು ಸಿಕ್ಕಿದ ಸುದ್ದಿಯನ್ನರುಹಿದರು. ಅರಸನು ಅತ್ಯಂತ ಸಂತೋಷ ಭರಿತನಾಗಿ ತನ್ನೆಲ್ಲ ಪರಿವಾರದೊಡನೆ ಸಂಭ್ರಮದಿಂದ ಮಾದರ ಕೇರಿಯತ್ತ ಹೊರಟೇ ಬಿಟ್ಟನು.

ಚೆನ್ನಯ್ಯನು ರಾಜನು ತನ್ನ ಪರಿವಾರದೊಂದಿಗೆ ತನ್ನತ್ತ ಬರುವುದನ್ನು ಕಂಡು ಗಾಬರಿಗೊಂಡು ಖಿನ್ನನಾದನು. "ನನ್ನ ಮನೆಗೆ ಅರಮನೆಯ ಈ ಚಾಕರರೇಕೆ? ಅರಸನೇಕೆ? ಶಿವಾಶಿವಾ!! ಮಹಾದೇವಾ! ನಾನು ಭಕ್ತನೆಂದು ಜನರು ಅರಿಯದಿದ್ದರೆ ಮಾತ್ರ ನಾನು ಬದುಕುವೆನು, ನನ್ನನ್ನು ಅವರು ಅರಿತ ಬಳಿಕ ನಾನು ಹೇಗೆ ಬದುಕಲಿ, ಹರಹರಾ! ನಾನೇನು ತಪ್ಪು ಮಾಡಿದೆನೆಂದು ಈ ಶಿಕ್ಷೆ" ಎಂದು ಪರಿತಪಿಸುತ್ತಿದ್ದಂತೇ-ಚೋಳರಾಜನು ರಾಜಪುತ್ರರನ್ನು ಕೂಡಿಕೊಂಡು ಅವನಿದ್ದಲ್ಲಿಗೆ ಬಂದು ಸಾಷ್ಟಾಂಗ ವೆರಗಿದನು.

ಆಗ ಚೆನ್ನಯ್ಯನು ಅರಸನಿಗೆ "ಚೋಳರಾಜನೇ, ಹೀಗೆ ನೀನೂ ಮಾಡ ಬೇಕೇ? —ಎಂದು ಕಂಪಿಸಿ ನುಡಿಯುತ್ತ – ರಾಜನೇ ನನ್ನ ಕಾಲನ್ನು ಬಿಡು ನಿನ್ನಾಣೆ! ಎನ್ನಾಣೆ!! " ಎಂದನು ಅರಸನು ಚೆನ್ನಯ್ಯನನ್ನುದ್ದೇಶಿಸಿ— "ಪರಮಾತ್ಮನ ಕೃಪೆಗೆ ಪಾತ್ರನಾದವನೇ ದೊಡ್ಡವನು, ಪರಮಾತ್ಮನು ನಿನ್ನೊಡನೆ ಉಂಡಿದ್ದಾನೆ. ನಿನಗಾರು ಸರಿ? ನಿನ್ನ ಪಾದುಕೆಗೆ ನನ್ನ ಶಿರಸ್ಸು ಸಹ ಸರಿಯಲ್ಲ" ಎಂದು ನುಡಿದು–'ಚೆನ್ನಯ್ಯನೇ ಪರಮಾತ್ಮನಿದ್ದಲ್ಲಿ ನಾವೀಗ ಹೋಗೋಣ ನಡೆ, ಎಲ್ಲವನ್ನೂ ಅವನಲ್ಲಿಯೇ ಕೇಳೋಣ,' ಎಂದು ಹೊರಡಿಸಿದನು. ಚೆನ್ನಯ್ಯನನ್ನು ಆನೆಯ ಮೇಲೆ ಕುಳ್ಳಿರಿಸಿದನು ಮತ್ತು ರಾಜನು ಕುದುರೆಯನ್ನೇರಿ ಅದರ ಮುಂದೆ ಹೋಗುತ್ತ ರಾಜಕುಮಾರರ ಸಂದಣಿಯಲ್ಲಿ ಚೆನ್ನಯ್ಯನನ್ನು ಸಂಭ್ರಮದಿಂದ ಕರೆದುಕೊಂಡು ದೇವಾಲಯದ ಮುಂದೆ ಬಂದು ನಿಂತನು.

ಚೆನ್ನಯ್ಯನು ಶಿವಲಿಂಗದ ಎದರು ಬಂದು ನಿಂತು ಕೊಂಡವನೇ – "ಪರಮಾತ್ಮನೇ. ನಾನು ಯಾವ ಅಪರಾಧವನ್ನು ಮಾಡಿದೆನು! ಚೋಳ ರಾಜನಿಂದ ನನ್ನನ್ನು ಹಿಡಿಸಿಕೊಂಡು ಬರಬೇಕಾಯಿತೇ? ನಿನಗೆ ನಾನು ಯಾವ ಮೋಸ ಮಾಡಿರುವೆನು ದೇವಾ! ನಾನು ಪದವಿಯನ್ನು ಬೇಡಿದೆನೇ? ನಾನು ಗುಪ್ತಭಕ್ತಿಯನ್ನು ಮಾಡುತ್ತ ಸುಖದಿಂದ ಕಾಲಕಳೆಯುತ್ತಿರುವಲ್ಲಿ ನನಗೀ ದುಃಸ್ಥಿತಿಯನ್ನು ಒದಗಿಸಿದೆಯಾ? ಇನ್ನು ಮೇಲೆ ನಾನು ಈ ಜಗತ್ತಿನಲ್ಲಿ ಬದುಕಿರಲಾರೆನು" ಎಂದು ಅಲಗನ್ನು ಕಿತ್ತು ತನ್ನ ಕೊರಳನ್ನು ಇರಿದುಕೊಂಡು ಪರಮಾತ್ಮನಿಗೆ ಅರ್ಪಿಸಲು ಸಿದ್ಧನಾದನು.

ಅಷ್ಟರಲ್ಲಿ ಶಿವಲಿಂಗದೊಳಗಿಂದ ಶಿವನು ಪ್ರತ್ಯಕ್ಷನಾಗಿ ಚೆನ್ನಯ್ಯನ ಕೈಯನ್ನು ಹಿಡಿದು – "ಚೆನ್ನಯ್ಯನೇ–ಹೀಗೆ ಅವಿಚಾರದಿಂದ ನಡೆಯಬಹುದೇ. ನೀನೇ ನನ್ನ ನಿಜವಾದ ಭಕ್ತನು, ನಿನ್ನ ಗುಪ್ತಪೂಜೆಯು ನನಗೆ ಪ್ರಿಯವಾಯಿತು. ನಾನು ನಿನ್ನ ರೀತಿಯನ್ನು ಚೋಳನಲ್ಲಿ ಹೇಳಿದರೆ ಕೋಪಿಸಬೇಕೆ" ಎಂದು ಸಮಾಧಾನ ಪಡಿಸಿದನು. ಶಿವನು ಚೋಳರಾಜನಿಗೆ – 'ಚೋಳನೇ – ಇದು ನೋಡು ಚೆನ್ನಯ್ಯನ ಈ ಗುಪ್ತಭಕ್ತಿಯನ್ನು, ಅವನ ಭಕ್ತಿಯಲ್ಲಿ ಆಡಂಬರವಿಲ್ಲ. ಇನ್ನು ಚೆನ್ನನು ಜಗತ್ತಿನಲ್ಲಿ ಮೆರೆಯಲಿ' ಎಂದು ನುಡಿದು ಲಿಂಗದಲ್ಲಿ ಅಡಗಿದನು.

ಆಗ ಕರಿಕಾಲಚೋಳನು ಪ್ರಸಾದದ ರೀತಿಯನ್ನು ಮಾದಾರ ಚೆನ್ನಯ್ಯನಿಂದ ಅರಿತವನಾಗಿ ಅವನನ್ನು ಸೇವಿಸುವನಾದನು. ಚೆನ್ನಯ್ಯನು ಚೋಳರಾಜ್ಯದಲ್ಲಿ ಇದ್ದು ಅಲ್ಲಿಯೇ ಲಿಂಗೈಕ್ಯನಾದನು. ಮಾದಾರ ಚೆನ್ನಯ್ಯನು ಉಚ್ಚತರದ ಶಿವಾನುಭಾವಿಯು ಅಲ್ಲದೆ ಉತ್ತಮ ವಚನಕಾರನೂ ಆಗಿದ್ದನು. ಅವನ ವಚನಗಳಲ್ಲಿ "ಕಯ್ಯಳಿಗತ್ತಿ ಅಡಿಗೂಂಟಕ್ಕಡೆಯಾಗ ಬೇಡ, ಅರಿ ನಿಜಾತ್ಮರಾಮನಾ" ಎಂದಿದೆಯಾದರೂ ತಮ್ಮ ಕಾಯಕವನ್ನು ಮಾಡುವಾಗ, ಕೈಯಲ್ಲಿ ಕತ್ತಿಯನ್ನೂ ಉಳಿಯನ್ನೂ ಹಿಡಿದು ತಮ್ಮ ಕಾರ್ಯದಲ್ಲಿ ಮಗ್ನರಾದರೂ, ಅಂತರಾತ್ಮವು ಪರಮಾತ್ಮನಲ್ಲಿ ಲೀನವಾಗಿರಬೇಕೆಂದು ಭಕ್ತರಿಗ ಬೋಧಿಸುತ್ತಾನೆ.

★

ಪೂಜೆಯನ್ನು ಹೊಂದುತ್ತಿದ್ದಾನೆ. ಋಗ್ವೇದದಲ್ಲೂ ಶಿವನ ಬಗ್ಗೆ ಉಲ್ಲೇಖಗಳಿವೆ ಯೆನ್ನುವುದ ರಿಂದ ಶಿವನು ವೇದಕಾಲದ ದೇವತೆಯೆನ್ನಲು ಅಭ್ಯಂತರವಿಲ್ಲ. ವೇದಗಳು ಶಿವನನ್ನು ಒಬ್ಬ ದೇವತೆಯೆನ್ನದೆ ಹಲವು ರೀತಿಯ ಶಿವಗಣಗಳೆಂದು ಹೇಳುತ್ತವೆ. ಹಲವಾರು ಕಡೆ ಈತ ರುದ್ರನೆಂದು ಹೆಸರಿಸಲ್ಪಟ್ಟಿದ್ದಾನೆ.

ಸಿಂಧು ಕೊಳ್ಳದ ಉತ್ಖನನಗಳಲ್ಲಿ ಹಲವಾರು ಲಿಂಗರೂಪೀ ಮುದ್ರೆಗಳು ದೊರಕಿದ್ದು, ಇವುಗಳಲ್ಲಿ ಒಂದು ದೇವತೆಯ ಸುತ್ತ ಹಲವು ಪಶುಗಣಗಳಿರುವುದರಿಂದ ಈತ ಪಶುಪತಿಯೆಂದೂ ಹೆಸರಾದ.

ಶೈವ ಮತದ ಬಗ್ಗೆ ದಕ್ಷಿಣಭಾರತದಲ್ಲಿ ಕ್ರಿಸ್ತಶಕದ ಆರಂಭ ಕಾಲದಿಂದಲೇ ಆಧಾರಗಳು ದೊರೆಯುತ್ತವೆ. ಶಾತವಾಹನರ ಕಾಲದ ಗುಡಿಮಲ್ಲಂ ಪರಶುರಾಮೇಶ್ವರ, ಶ್ರೀಪರ್ವತದ ಪುಷ್ಪಭದ್ರ ಸ್ವಾಮಿ ಆಲಯಗಳು ಶಿವಪೂಜಾಪ್ರಾಚೀನತೆಗೆ ಸಾಕ್ಷಿ. ಆಂಧ್ರದ ಕಾಕತೀಯರ ಕಾಲದಲ್ಲಿ ಕನ್ನಡದ ಕಳಚೂರ್ಯರ ಕಾಲದಲ್ಲಿ ಶೈವಮತ ಹೆಚ್ಚು ಪ್ರಸಾರ ಹೊಂದಿತೆನ್ನಬೇಕು. ಇನ್ನೂ ದಕ್ಷಿಣಕ್ಕೆ ಇನ್ನೂ ಹಿಂದೆಯೇ ತಮಿಳಿನ ನಾಯನ್ಮಾರರ ಭಕ್ತಿ ನಂತರ ಚೋಳರ ರಾಜಾಶ್ರಯ ಶಿವಪೂಜೆಯನ್ನು ಹೆಚ್ಚು ವ್ಯಾಪಕಗೊಳಿಸಲು ನೆರವಾದವು.

ಹಿಂದೂ ಮತದಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರು ಸೃಷ್ಟಿಸ್ಥಿತಿಲಯಗಳಿಗೆ ಕಾರಕರು. ಶಿವನು ಪ್ರಳಯ ಮೂರ್ತಿಯೇ ಅಲ್ಲದೆ ಸಕಲವರಪ್ರದಾತನೂ ಹೌದು. ಶಿವನನ್ನು ಲಿಂಗರೂಪದಲ್ಲಿಯೇ ಅಲ್ಲದೆ ಪ್ರತಿಮಾರೂಪದಲ್ಲೂ ಪೂಜಿಸಬಹುದು. ಪ್ರತಿಮೆಗಳಲ್ಲೂ ಸೌಮ್ಯಗಳೆಂದು, ರೌದ್ರಗಳೆಂದು ಎರಡು ಬಗೆ. ಸ್ಥಾವರಲಿಂಗಗಳನ್ನು ಸ್ವಯಂಭೂಗಳೆನ್ನುತ್ತಾರೆ. ಮನುಷ್ಯರೂಪವನ್ನು ಹೋಲುವ ಶಿವ ಸ್ಥಾನಕ ಅಥವಾ ಆಸೀನ ಮೂರ್ತಿಯಾಗಿದ್ದು ನಾಲ್ಕು ಕೈಗಳನ್ನು ಹೊಂದಿದ್ದು ಹಿಂದಿನ ಕೈಗಳಲ್ಲಿ ಪರಶು, ಮೃಗಗಳನ್ನು ಹಿಡಿದಂತೆಯೂ ಮುಂದಿನ ಕೈಗಳಲ್ಲಿ ಅಭಯವರದ ಮುದ್ರೆಗಳನ್ನೂ ಹೊಂದಿರುತ್ತಾನೆ.ಜಟಾಮುಕುಟದಲ್ಲಿ ಅರ್ಧಚಂದ್ರ ಗಂಗೆ ಮೊದಲಾದವುಗಳಿರುತ್ತವೆ. ನಡುವಿಗೆ ಹುಲಿ ಚರ್ಮ ಉಡುಪು. ಶಿವನ ಮೂರ್ತಿಗಳು ಹಲವಾರು; ಅವುಗಳಲ್ಲಿ ಸ್ಥಾನಕ ಮೂರ್ತಿ, ಆಸೀನ ಮೂರ್ತಿ, ನೃತ್ಯಮೂರ್ತಿ (ನಟರಾಜ) ಅರ್ಧನಾರೀಶ್ವರ ಮೊದಲಾದವುಗಳು ಮುಖ್ಯ.

## ಸ್ಥಾನಕ ಮೂರ್ತಿ :

(ಲಿಂಗೋದ್ಭವ ಮೂರ್ತಿ) ಪೂರ್ವದಲ್ಲೊಮ್ಮೆ ಸೃಷ್ಟಿಗೆ ಮೂಲಪುರುಷ ಯಾರು ಎಂಬ ವಿವಾದ ಬ್ರಹ್ಮ ವಿಷ್ಣುಗಳಲ್ಲಿ ಉಂಟಾಗಲು ಈಶ್ವರನು ಅವರಿದುರಿಗೆ ಲಿಂಗರೂಪದಲ್ಲಿ ನಿಂತು ತನ್ನ ಮೂಲವನ್ನು ಕಂಡು ಕೊಂಡವರೇ ಸೃಷ್ಟಿಗೆ ಮೂಲವೆನ್ನಲು, ವಿಷ್ಣುವು ವರಾಹ ರೂಪದಲ್ಲಿ ಲಿಂಗದ ಬುಡದ ಕಡೆಯೂ ಬ್ರಹ್ಮನು ಹಂಸರೂಪದಲ್ಲಿ ಲಿಂಗದ ಊರ್ಧ್ವಭಾಗದಲ್ಲೂ ಪ್ರಯಾಣ ಮಾಡಿ ಅನೇಕ ಸಹಸ್ರವರ್ಷನಾದರೂ ಅವರ ಪ್ರಯತ್ನ ವಿಫಲವಾಯಿತು. ಹೀಗೆ ಶಿವನು ತಾನೇ ಸೃಷ್ಟಿಗೆ ಮೂಲವೆಂದು ನಿರೂಪಿಸಿಕೊಂಡ. ಲಿಂಗೋದ್ಭವ ಮೂರ್ತಿಯ ಲಿಂಗದ ಮಧ್ಯಭಾಗದ ಮೇಲೆ ಬಲಭಾಗದಲ್ಲಿ ಬ್ರಹ್ಮನು ಹಂಸರೂಪದಲ್ಲೂ ತಳಭಾಗದಲ್ಲಿ ಎಡಗಡೆಗೆ ವಿಷ್ಣುವೂ ತೋರಿಸಲ್ಪಡುವರು. ಸೃಷ್ಟಿಯ ಪ್ರತಿರೂಪವೇ ಲಿಂಗವೆನ್ನಬಹುದು. ಉದಾ: ಆಕಾಶವೇ ಲಿಂಗ, ಭೂಮಿಯೇ ಪೀಠವಟ್ಟ, ಸರ್ವಭೂತಗಳೂ ಆಲಯ–ಇವೆಲ್ಲ ಸೇರಿ ಶಿವಲಿಂಗದ ಪೂರ್ಣರೂಪ.

## ಆಸೀನ ಮೂರ್ತಿ :

ಈ ಪ್ರತಿಮೆಯಲ್ಲಿ ಶಿವನು ಪೀಠದ ಮೇಲೆ ಕುಳಿತು ಎಡಗಾಲು ಮಡಿಸಿ ಬಲಗಾಲನ್ನು ಕೆಳಗಿಳಿಬಿಟ್ಟು, ಹಿಂದಿನೆರಡು ಕೈಗಳಲ್ಲಿ ಪರಶು, ಮೃಗ ಮುಂದಿನ ಕೈಗಳಲ್ಲಿ ಅಭಯ ವರದ ಮುದ್ರೆಗಳಿರುತ್ತವೆ. ದಕ್ಷಿಣಾಮೂರ್ತಿಯನ್ನೂ ಆಸೀನ ಮುದ್ರೆಯಲ್ಲಿ ನೋಡಬಹುದು. ಈತ ಪರ್ವತಪ್ರಾಂತ್ರದಲ್ಲಿ ಗಿಡದ ಕೆಳಗೆ ಹುಲಿಚರ್ಮದ ಮೇಲೆ ಆಸೀನನಾಗಿರಬಹುದು. ಸ್ವಾಮಿಯ ಬದಿಗೆ ಪಾರ್ವತಿಯಿದ್ದಲ್ಲಿ ದೇವೀ ಸಹಿತ ಮೂರ್ತಿ ಅಥವಾ ಆಲಿಂಗನ ಮೂರ್ತಿ ಎನ್ನುತ್ತಾರೆ. ಜೊತೆಗೆ ಸ್ಕಂದಸ್ವಾಮಿಯಿದ್ದಲ್ಲಿ ಸೋಮಸ್ಕಂದ ಮೂರ್ತಿ ಎನ್ನಬಹುದು.

## ನಟರಾಜ :

ಈ ಮೂರ್ತಿಯಲ್ಲಿ ಶಿವನ ಬಲಗಾಲು ಬಾಗಿ ಅಪಸ್ಮಾರ ಪುರುಷನ ಮೇಲಿದ್ದು ಎಡಗಾಲಿನ ಮೇಲೆ ಕತ್ತಿಯಿರುತ್ತದೆ. ಎಡಗೈಯ್ಯಲ್ಲಿ ಢಮರುಗವೂ ಬಲಗೈಯಲ್ಲಿ ಅಗ್ನಿಗೋಳವೂ ಇರುವುದು. ಶಿರ ಚಂದ್ರ ಜಟಾ ಮಕುಟವಾಗಿ ಎಡಗಡೆಗೆ ಪಾರ್ವತಿಯಿರುವಳು. ಈ ಮೂರ್ತಿ ಭಾರತೀಯರಿಗೆ ಅತಿ ಪ್ರೀತಿಪಾತ್ರ ಆಗಿದೆ.

## ಅರ್ಧನಾರೀಶ್ವರ :

ಶಿವನ ಅರ್ಧಭಾಗ ಸ್ತ್ರೀರೂಪವಾಗಿಯೂ, ಉಳಿದರ್ಧ ಪುರುಷರೂಪನಾಗಿಯೂ, ಶಿರ ಜಟಾಮುಕುಟವೂ ಅರ್ಧಚಂದ್ರಾಲಂಕೃತವೂ ಆಗಿದ್ದು ಕೈಗಳಲ್ಲಿ ಪರಶು, ಶಂಖ, ಅಕ್ಷಮಾಲೆ, ವರದ ಹಾಗೂ ಅಭಯಮುದ್ರೆ ಮೊದಲಾದವುಗಳಿರುತ್ತವೆ. ಈ ಪ್ರತಿಮೆ ಪ್ರಕೃತಿ ಪುರುಷರ ಏಕತೆಯ ಪ್ರತೀಕ. ಶಿವನನ್ನು ಭಿಕ್ಷಾಮೂರ್ತಿಯಾಗಿಯೂ, ಕಲ್ಯಾಣ ಸುಂದರಮೂರ್ತಿ ಆಗಿಯೂ, ಹರಿಹರ ಮೂರ್ತಿಯಾಗಿಯೂ, ಗಂಗಾಧರ ಮೂರ್ತಿಯಾಗಿಯೂ, ಅನುಗ್ರಹ ಮೂರ್ತಿಗಳಲ್ಲಿ ವಿಷ್ಣು ಅನುಗ್ರಹ, ರಾವಣಾನುಗ್ರಹ, ಚಂಡೇಶಾನುಗ್ರಹ ಮೂರ್ತಿಗಳೂ, ಪ್ರಳಯಮೂರ್ತಿಗಳಲ್ಲಿ ತ್ರಿಪುರಾಂತಕಮೂರ್ತಿ, ಕಾಲಭೈರವ ಮೂರ್ತಿಯೂ, ಅಂಧಕಾಸುರನಿಗ್ರಹ ಮೂರ್ತಿಗಳೂ ಉಂಟು.

ಭಾರತದ ಲಕ್ನೋ ವಸ್ತು ಸಂಗ್ರಹಾಲಯದ ಶಿವಲಿಂಗವೂ, ಗುಡಿಮಲ್ಲಂನ ಪರಶುರಾಮೇಶ್ವರ ಲಿಂಗವೂ ಅತ್ಯಂತ ಪುರಾತನವಾದವು. ಈ ದೇಶದಲ್ಲಿ ವೈಷ್ಣವಾಲಯಗಳಿಗಿಂತ ಶಿವಾಲಯಗಳೇ ಹೆಚ್ಚೆನ್ನಬಹುದು. ಆಂಧ್ರದೇಶವನ್ನು ತ್ರಿಲಿಂಗ ದೇಶವೆಂದು ಕರೆಯುವುದರಿಂದ ಇಲ್ಲಿ ಶೈವಾರಾಧನೆಯ ಪ್ರಾಚೀನತೆಯನ್ನು ತಿಳಿಯಬಹುದು ಇಂದಿಗೂ ಕಾಶಿ, ರಾಮೇಶ್ವರ, ಚಿದಂಬರಂ, ಶ್ರೀಶೈಲ, ಹಂಪೆ, ಕಾಳಹಸ್ತಿಗಳು ಅತ್ಯಂತ ಖ್ಯಾತವಾಗಿವೆ.

ಹಿಂದೂಗಳ ಹಬ್ಬಗಳಲ್ಲಿ ಶ್ರೀಕೃಷ್ಣ ಜನ್ಮಾಷ್ಟಮಿಯಂತೆಯೇ ಶಿವರಾತ್ರಿಯೂ ಪ್ರಸಿದ್ಧವಾದದ್ದು. ಶಿವರಾತ್ರಿಯದಿನ ಉಪವಾಸದ ಜಾಗರಣೆಮಾಡಿ ಶಿವಪೂಜೆಯನ್ನು ಮಾಡುವುದರಿಂದ ಸಕಲ ಸುಖಗಳೂ, ಮೋಕ್ಷವೂ ದೊರೆಯುವುದೆಂದು ಪ್ರತೀತಿ.

ಆಧಾರ: ಶ್ರೀ. ಪಿ. ಕೃಷ್ಣಮೂರ್ತಿ

# ಸೂರ್ಯ ಚಿಕಿತ್ಸೆ

(ಮುಂದುವರಿದದ್ದು)

## ಸೂರ್ಯಸ್ನಾನದ ವಿಧಗಳು

ಆವಶ್ಯಕತೆಗೆ ತಕ್ಕಂತೆ ಸೂರ್ಯಸ್ನಾನದಲ್ಲಿ ಹಲವು ವಿಧಗಳಿವೆ.

೧. ಸರಳಸೂರ್ಯಸ್ನಾನ:— ಪ್ರಾತಃಕಾಲ ೮ ಗಂಟೆಯೊಳಗೆ ಸಾಯಂಕಾಲ ೫ ಗಂಟೆಯನಂತರ ಆದಷ್ಟು ಕಡಿಮೆ ಉಡುಪುಧರಿಸಿ ಸುಮಾರು ೩೦ ನಿಮಿಷಗಳಕಾಲ ಬಯಲಿನಲ್ಲಿ ಓಡಾಡಬೇಕು. ದುರ್ಬಲರು ತಲೆಗೆ ಪಟ್ಟಿಕಟ್ಟಿಕೊಳ್ಳಬಹುದು. ಆರೋಗ್ಯವಂತರೂ ಸಹ ಈ ಸ್ನಾನವನ್ನು ಮಾಡಬಹುದು.

೨. ವ್ಯಾಯಾಮ ಸೂರ್ಯಸ್ನಾನ:— ಪ್ರಾತಃಕಾಲ ಮತ್ತು ಸಾಯಂಕಾಲದ ಎಳೆಬಿಸಿಲಿನಲ್ಲಿ ಯೋಗಾಸನ, ಸೂರ್ಯನಮಸ್ಕಾರ, ಸರ್ವಾಂಗಸುಂದರ ವ್ಯಾಯಾಮ ಅಥವಾ ಗರಡಿ ಸಾಧನೆಗಳನ್ನು ಅಭ್ಯಸಿಸುವುದೇ 'ವ್ಯಾಯಾಮ ಸೂರ್ಯಸ್ನಾನ'. ವ್ಯಾಯಾಮವಾದನಂತರ ಅರ್ಧಗಂಟೆಬಿಟ್ಟು, ತಣ್ಣೀರುಸ್ನಾನ ಮಾಡಬೇಕು.

೩. ಸೌಮ್ಯ ಸೂರ್ಯಸ್ನಾನ : — ಸೂರ್ಯೋದಯವಾದ ೩ ಗಂಟೆಯ ಒಳಗೆ ಮತ್ತು ಸಾಯಂಕಾಲ ೪ ಗಂಟೆಯ ಮೇಲೆ ಮಾಡುವ ಸೂರ್ಯಸ್ನಾನವೇ 'ಸೌಮ್ಯಸೂರ್ಯಸ್ನಾನ' ರೋಗಿಯನ್ನು ಬಿಸಿಲಿನಲ್ಲಿ ಚಾಪೆಯ ಮೇಲೆ ಮಲಗಿಸಿ ಮುಖ ನೆರಳಿನಲ್ಲಿರುವಂತೆ ಮಾಡಬೇಕು. ಶರೀರದ ಮೇಲೆ ತೆಳುವಾದ ಹತ್ತಿಬಟ್ಟೆ ಹೊಂದಿಸಿರಬೇಕು. ಮೈಬಿಸಿಯಾದ ನಂತರ ಒದ್ದೆಬಟ್ಟೆಯನ್ನು ಕುತ್ತಿಗೆಯಿಂದ ಮೊಣಕಾಲಿನವರೆಗೆ ಮುಚ್ಚಬೇಕು. ೧೫ ರಿಂದ ೩೦ ನಿಮಿಷ ಈ ಸ್ನಾನ ಆಚರಿಸಬೇಕು.

೪. ಚೈತನ್ಯದಾಯಕ ಸೂರ್ಯಸ್ನಾನ: ನಿಶ್ಶಕ್ತರೋಗಿಗಳು ತುಂಬಾಕಡಿಮೆ ಉಡುಪುಧರಿಸಿ ತೆಳುವಾದ ಬಟ್ಟೆಹೊದ್ದು ಮುಖದ ಮೇಲೆ ಸೂರ್ಯರಶ್ಮಿ ಬೀಳದಂತೆ ಬಿಸಿಲಿನಲ್ಲಿ ಕುಳಿತುಕೊಳ್ಳುವುದೇ 'ಚೈತನ್ಯದಾಯಕ ಸೂರ್ಯಸ್ನಾನ' ಮೈಕಾವೇರುವವರೆಗೂ ಬಿಸಿಲಿನಲ್ಲಿ ಕುಳಿತಿದ್ದು ಅನಂತರ ನೆರಳಿಗೆ ಹೋಗಿ ಶರೀರವನ್ನು ಒದ್ದೆಬಟ್ಟೆಯಿಂದ ಒರೆಸಿಕೊಂಡು ಮತ್ತೆ ಬಿಸಿಲಿಗೆ ಬರಬೇಕು. ಸೂರ್ಯೋದಯವಾದ ೪ ಗಂಟೆಯೊಳಗೆ ಅಥವಾ ಮಧ್ಯಾಹ್ನ ೩ ಗಂಟೆಯ ನಂತರ ಈ ಸ್ನಾನವನ್ನು ಮಾಡಬಹುದು.

೫. ಹಸಿರು ಎಲೆಯ ಸೂರ್ಯಸ್ನಾನ:— ಬೆಳಗ್ಗೆ ೯ ಗಂಟೆಯಿಂದ ಮಧ್ಯಾಹ್ನ ೧೨ ಗಂಟೆಯ ವರೆಗೆ, ಅನಂತರ ಮಧ್ಯಾಹ್ನ ೩ ಗಂಟೆಯಿಂದ ಸಾಯಂಕಾಲ ೫ ಗಂಟೆಯವರೆಗೆ ಹಾಸಿದ ಕಂಬಳಿಯ ಮೇಲೆ ಪಂಚೆಯನ್ನು ಹಾಸಿ, ಅದರ ಮೇಲೆ ಬಾಳೆ ಎಲೆ ಹಾಸಿ, ಅದರ ಮೇಲೆ ರೋಗಿಯನ್ನು ನಗ್ನವಾಗಿ ಮಲಗಿಸಬೇಕು. ಅನಂತರ ಮೈಮೇಲೆ ಹಸಿರು ಎಲೆಗಳನ್ನು ಮುಚ್ಚಿ ಮೇಲೆ ಕಂಬಳಿ ಹೊದಿಸಬೇಕು.

೬. ಕಣ್ಣಿನ ಸೂರ್ಯಸ್ನಾನ :— ಉದಯಿಸಿ ಬರುತ್ತಿರುವ ಅಥವಾ ಅಸ್ತಂಗತನಾಗುತ್ತಿರುವ ಸೂರ್ಯನನ್ನು ಮೊದಲು ನೇರವಾಗಿ ನೋಡುವ ಅಭ್ಯಾಸ ಮಾಡಬೇಕು. ಅನಂತರ ಕತ್ತಲೆಯ ಸ್ಥಳಕ್ಕೆ ಹೋಗಿ ಕಣ್ಣನ್ನು ಮೆದುವಾಗಿ ಉಜ್ಜಿಕೊಳ್ಳಬೇಕು. ಆಮೇಲೆ ಕಣ್ಣುಗಳನ್ನು ಶುದ್ಧವಾದ ತಣ್ಣೀರಿನಿಂದ ತೊಳೆಯಬೇಕು.

೭. ಮರದ ನೆರಳಿನ ಸೂರ್ಯಸ್ನಾನ:— ವಿರಳವಾದ ಎಲೆಗಳನ್ನು ಹೊಂದಿರುವ ಮರದ ನೆರಳಿನಲ್ಲಿ ಸೂರ್ಯಸ್ನಾನ ಮಾಡುವುದು ಒಂದು ಪದ್ಧತಿ. ಔಷಧ ಗುಣವಿರುವ ಎಲೆಗಳನ್ನು ಶರೀರದ ಮೇಲೆ ಹರಡಿ ಸೂರ್ಯಸ್ನಾನ ಮಾಡುವ ಪದ್ಧತಿಯೂ ಬಳಕೆಯಲ್ಲಿದೆ. ಈ ಎಲೆಗಳು ರೋಗಕ್ಕೆ ಅನುಗುಣವಾಗಿರಬೇಕು. ಉದಾಹರಣಾರ್ಥವಾಗಿ ಚರ್ಮರೋಗದವರು ಬೇವಿನ ಎಲೆಯನ್ನೂ, ಮೈಕೈನೋವಿನವರು ಎಕ್ಕದ ಎಲೆಯನ್ನೂ ಉಪಯೋಗಿಸಿ ಸೂರ್ಯಸ್ನಾನ ಮಾಡಬೇಕು.

೮. ಕುನ್ನೆಯವರ ಸೂರ್ಯಸ್ನಾನ :— ಆರೋಗ್ಯವಂತರಾದವರು ತಮ್ಮ ದೇಹವನ್ನು ತೆಳುವಾದ ಬಟ್ಟೆಯಿಂದ ಮುಚ್ಚಿಕೊಂಡು ಪ್ರಖರವಾದ ಸೂರ್ಯರಶ್ಮಿ ಇರುವಾಗ ಬಿಸಿಲಿನಲ್ಲಿ ಮಲಗಬೇಕು. ಮುಖದಮೇಲೆ ಒದ್ದೆಬಟ್ಟೆಯನ್ನು ಹಾಕಿಕೊಂಡಿರಬೇಕು. ಬೆವರು ಬರುವ ತನಕ ಮಲಗಿದ್ದು, ಬೆವರು ಬಂದ ಬಳಿಕ ಒದ್ದೆ ಬಟ್ಟೆಯಿಂದ ಶರೀರವನ್ನು ಒರೆಸಬೇಕು. 'ಕುನ್ನೆ' ಎನ್ನುವರು ಈ ಪದ್ಧತಿಯನ್ನು ಬಳಕೆಗೆ ತಂದದ್ದರಿಂದ ಇದನ್ನು 'ಕುನ್ನೆಯವರ ಸೂರ್ಯಸ್ನಾನ' ಎಂದು ಕರೆಯುತ್ತಾರೆ.

೯. ಸೌಂದರ್ಯವರ್ಧನೆಯ ಸೂರ್ಯಸ್ನಾನ : ವಿದೇಶಗಳಲ್ಲಿ ಸೌಂದರ್ಯವರ್ಧನೆಗಾಗಿ ಸೂರ್ಯಸ್ನಾನವನ್ನು ಆಚರಣೆಗೆ ತಂದಿದ್ದಾರೆ. ಈಚೆಗೆ ಸಮುದ್ರತೀರದಲ್ಲಿ ಲಿಂಗಭೇದವಿಲ್ಲದೆ ಎಲ್ಲರೂ ಕಲೆತು ಸೂರ್ಯಸ್ನಾನ ಮಾಡುವುದು ಸಾಮಾನ್ಯ ಸಂಗತಿ.

## ಸೂರ್ಯಸ್ನಾನದಿಂದ ರೋಗ ನಿರೋಧ

೧. ರಿಕೆಟ್ಸ್ :— ಸೂರ್ಯನ ಬೆಳಕಿನಲ್ಲಿರುವ ಬಣ್ಣವನ್ನು ಉಪಯೋಗಿಸಿಕೊಂಡು ನಮ್ಮ ದೇಹವು ಡಿ–ಅನ್ನಸತ್ವವನ್ನು ತಯಾರಿಸಿಕೊಳ್ಳುತ್ತದೆ. ಡಿ–ಅನ್ನಾಂಗದ ಕೊರತೆಯಿಂದ 'ರಿಕೆಟ್ಸ್' ಎಂಬ ರೋಗ ಬರುತ್ತದೆ. ಡಿ–ಅನ್ನಸತ್ವ ಸೂರ್ಯರಶ್ಮಿಯಿಂದ ಮಾತ್ರ ಲಭ್ಯ



ಸೂರ್ಯ ನಾರಾಯಣಸ್ವಾಮಿ

ಶ್ರೀ ಕೆ. ಕೇಶವಮೂರ್ತಿ

ನ್ಯೂನತೆ:— ಈ ರೋಗದ ನ್ಯೂನತೆಯೆಂದರೆ ದೇಹದ ಮೂಳೆಗಳು ಮೃದುವಾಗಿ ಮನುಷ್ಯ ಶಕ್ತಿಹೀನನಾಗುತ್ತಾನೆ. ಈ ರೋಗವು ಸಾಮಾನ್ಯವಾಗಿ ಗರ್ಭಿಣಿಸ್ತ್ರೀಯರಲ್ಲಿ ಕಂಡು ಬರುತ್ತದೆ. ಗರ್ಭದ ಬೆಳವಣಿಗೆಯಲ್ಲಿ ಡಿ-ಅನ್ನಾಂಗವು ಪ್ರಮುಖ ಪಾತ್ರ ವಹಿಸುತ್ತದೆ. ಆದರೆ ಗರ್ಭಿಣಿ ಸ್ತ್ರೀಯರು ದಣಿಯಬಾರದೆಂದು ಅವರನ್ನು ಮನೆಯ ಒಳಗೇ ಇಟ್ಟಿರುವುದು ನಮ್ಮ ಅತಿಯಾದ ಉಪಚಾರ. ಈ ಉಪಚಾರವು ಅವರಿಗೆ ಅಪಚಾರವಾಗಿ ಪರಿಣಮಿಸಿ ಡಿ-ಅನ್ನಾಂಗದ ಕೊರತೆ ತಲೆದೋರುತ್ತದೆ.

ಲಕ್ಷಣ:— ಈ ರೋಗದ ಲಕ್ಷಣವೆಂದರೆ ಸಾಮಾನ್ಯವಾಗಿ ತಲೆಸುತ್ತುವಿಕೆ, ಅತಿಯಾದ ಆಯಾಸ, ಮೂಳೆಗಳ ನೋವು ಮತ್ತು ಕೆಲವು ಸಂದರ್ಭಗಳಲ್ಲಿ ಸ್ನಾಯುಗಳಲ್ಲಿ ನೋವು ಕಂಡು ಬರುತ್ತದೆ.

ಫಲಿತಾಂಶ:— ಡಿ-ಅನ್ನಾಂಗದ ಕೊರತೆಯಿಂದ ಹೆರಿಗೆಯ ಸಂದರ್ಭದಲ್ಲಿ ಮಿದುಳು ನೀಡುವ ಸಂದೇಶವನ್ನು ಮೂಳೆಗಳು ಪಾಲಿಸಲಾರದೆ ಹೋಗುತ್ತದೆ. ಇದರಿಂದ ಶಿಶುವು ಗರ್ಭದಿಂದ ಹೊರಬರಲು ಸೂಕ್ತಮಾರ್ಗ ರಚನೆಯಾಗದೆ ಮೃದುವಾದ ಮೂಳೆಗಳು ಅಡ್ಡ ಬರುತ್ತವೆ. ಇದರಿಂದಾಗಿ ಅತಿಯಾದ ರಕ್ತಸ್ರಾವವಾಗುತ್ತದೆ. ಆದರೂ ಶಿಶು ಜನನವಾಗದೆ ತಾಯಿ ಮರಣವನ್ನಪ್ಪುವ ಸನ್ನಿವೇಶವೂ ಉಂಟು. ಶಿಶು ಉಳಿಯುವುದೂ ಅಸಂಭವ. ಶಸ್ತ್ರ ಚಿಕಿತ್ಸೆಯ ಮೂಲಕ ಹೆರಿಗೆ ಮಾಡಿಸಲಾಗುತ್ತದೆ.

ಚಿಕಿತ್ಸೆ:— ಹೀಗೆ ಸಂಭವಿಸಬಹುದಾದ ದುರಂತವನ್ನು ಸೌಮ್ಯ ಸೂರ್ಯಸ್ನಾನದಿಂದ ಬಹು ಸುಲಭವಾಗಿ ತಪ್ಪಿಸಬಹುದು. ನಗ್ನ ಸೂರ್ಯಸ್ನಾನವು ಅವರಿಗೆ ಸರ್ವೋತ್ತಮವಾದುದು. ಇದರಿಂದ ಡಿ-ಅನ್ನಾಂಗವು ಉತ್ಪಾದನೆಯಾಗಿ ಮೂಳೆಗಳು ಗಟ್ಟಿಯಾಗುತ್ತವೆ.

ಬೆಳಗ್ಗೆ ಮತ್ತು ಸಾಯಂಕಾಲ ಬಿಸಿಲಿನಲ್ಲೇ ಕೆಲಸ ಮಾಡುವವರಿಗೆ ಡಿ-ಅನ್ನಾಂಗದ ಕೊರತೆ ಕಂಡುಬರುವುದಿಲ್ಲ. ಅವರಿಗೆ ಸಹಜವಾಗಿಯೇ ಸೂರ್ಯಸ್ನಾನ ಲಭ್ಯ.

೨. ನೇತ್ರರೋಗ:— ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಸೂರ್ಯನು ನೇತ್ರಕಾರಕ. ನೇತ್ರ ರೋಗಿಗಳು 'ಕಣ್ಣಿನ ಸೂರ್ಯಸ್ನಾನ' ಮಾಡಬೇಕು.

೩. ಕ್ಯಾನ್ಸರ್:— ಇದನ್ನು 'ಅರ್ಬುದ ರೋಗ'ವೆಂದು ಕರೆಯುತ್ತಾರೆ. ಇದೊಂದು ಭಯಂಕರರೋಗ. ರೋಗಿಯನ್ನು ಪ್ರತಿದಿನ ಬೆಳಗ್ಗೆ ಬಿಸಿಲಿನಲ್ಲಿ ಕೂರಿಸಿ 'ವಿರುದ್ಧ ಹಸ್ತಚಾಲನ' ಮಾಡುವಂತೆ ಹೇಳಬೇಕು.

೪. ಅಪಸ್ಮಾರ:— ಅಪಸ್ಮಾರವೆಂದರೆ 'ಮೂರ್ಛೆರೋಗ'. ಇದನ್ನು 'ಮಲರೋಗ'ವೆಂತಲೂ ಕರೆಯುತ್ತಾರೆ. ಈ ರೋಗವಿರುವ ವ್ಯಕ್ತಿಯನ್ನು ತಲೆ ಮತ್ತು ಪಾದಗಳನ್ನುಳಿದು ಇತರ ಭಾಗಗಳನ್ನು ದಪ್ಪನೆಯ ಬಟ್ಟೆಯಿಂದ ಸುತ್ತಿ ಬೆಳಗಿನ ಬಿಸಿಲಿನಲ್ಲಿ ಒಂದು ಮರದ ಕುರ್ಚಿಯ ಮೇಲೆ ಕೂರಿಸಿ, ಪಾದವನ್ನು ಬಿಸಿ ನೀರು ತುಂಬಿದ ಪಾತ್ರೆಯಲ್ಲಿರಿಸಿ ತಲೆಯ ಮೇಲೆ ಒದ್ದೆ ಬಟ್ಟೆಯನ್ನಿರಿಸಬೇಕು. ಬಿಸಿನೀರನ್ನು ಆಗಾಗ್ಗೆ ಬದಲಾಯಿಸುತ್ತಿರಬೇಕು. ಹೀಗೆ ಎರಡು ದಿನಕ್ಕೊಮ್ಮೆ ಒಂದರಿಂದ ಎರಡುಗಂಟೆ ಕಾಲ ಚಿಕಿತ್ಸೆ ನೀಡಬೇಕು.

೫. ಚರ್ಮರೋಗಗಳು:— ಚರ್ಮರೋಗಿಗಳು ಮೈಗೆ ಬೇವಿನೆಣ್ಣೆ ಸವರಿಕೊಂಡು ಮಧ್ಯಾಹ್ನದ ಪ್ರಖರ ಬಿಸಿಲಿನಲ್ಲಿ ೧೦ ನಿಮಿಷ ಕಾಲ ಸೂರ್ಯಸ್ನಾನ ಮಾಡಬೇಕು.

೬. ಪಿತ್ತವಿಕಾರ:— ಪಿತ್ತವಿಕಾರವಿರುವವರು ಕಾಡುಬಾದಾಮಿಯನ್ನು ಮಜ್ಜಿಗೆಯಲ್ಲಿ ಅರೆದು ಮೈಗೆ ಸವರಿಕೊಂಡು ಬೆಳಗಿನ ಬಿಸಿಲಿನಲ್ಲಿ ತುಸು ಹೊತ್ತು ಇದ್ದು ನಂತರ ನೀರಿನಲ್ಲಿ ಸ್ನಾನಮಾಡಬೇಕು.

೭. ಕ್ಷಯ:— ಕ್ಷಯರೋಗಿಗಳು ಎಳೆ ಬಿಸಿಲಿನಲ್ಲಿ ನಿತ್ಯ ೧೫ ನಿಮಿಷಕಾಲ ಸೂರ್ಯಸ್ನಾನ ಮಾಡಬೇಕು.

## ಸೂರ್ಯಸ್ನಾನದ ಇತರ ಪ್ರಯೋಜನಗಳು

೧. ಸೂರ್ಯರಶ್ಮಿ ಕೇವಲ ರೋಗನಿವಾರಕವಷ್ಟೇ ಅಲ್ಲ; ಅವಶ್ಯಕ ಆಹಾರವೂ ಹೌದು. ಸೂರ್ಯಸ್ನಾನವು ನಮ್ಮ ದೇಹದ ಮೇಲೆ ಸತ್ಪರಿಣಾಮ ಬೀರುವಂತೆಯೇ ನಾವು ಸೇವಿಸುವ ಆಹಾರದ ಮೇಲೆಯೂ ಪ್ರಭಾವ ಬೀರುತ್ತದೆ. ಸೂರ್ಯನಿಂದ ಪಕ್ವವಾದ ಆಹಾರ ಜೀವದಾಯಕ. ಮರದಮೇಲೆಯೇ ಪಕ್ವವಾದ ಹಣ್ಣುಗಳು ಅಡಿಹಾಕಿ ಕೃತಕವಾಗಿ ಹಣ್ಣಾದವುಗಳಿಗಿಂತ ಶ್ರೇಷ್ಠವಾದುದು. ತಾಜಾ ತರಕಾರಿಗಳು ಸೌರಶಕ್ತಿಯನ್ನು ಹೆಚ್ಚಾಗಿ ಉಪಯೋಗಿಸಿಕೊಂಡು ತಯಾರಾಗಿರುತ್ತವೆ. ಆದ್ದರಿಂದ ತರಕಾರಿಯನ್ನು ಬೇಯಿಸದೆ ತಿನ್ನುವುದು ಆರೋಗ್ಯಕರ. ಬೇಯಿಸುವುದರಿಂದ ಅನ್ನಸತ್ವಗಳು ನಷ್ಟವಾಗುತ್ತವೆ.

೨. ಗರ್ಭಿಣಿಯರಿಗೆ ಮಾತ್ರವಲ್ಲದೆ ಬಾಣಂತಿಯರಿಗೂ ಸಹ ಸೂರ್ಯಸ್ನಾನ ಅಗತ್ಯ.

೩. ಸೂರ್ಯಸ್ನಾನದಿಂದ ಶರೀರದಲ್ಲಿ ಶಾಖೋತ್ಪತ್ತಿಯಾಗುತ್ತದೆ. ಇದರಿಂದ ಜೀರ್ಣಾಂಗಗಳು ಹಾಗೂ ನರಮಂಡಲದ ಕಾರ್ಯ ನಡೆಯುತ್ತದೆ.

೪. ರಕ್ತಚಲನೆಯ ವೇಗ ಹೆಚ್ಚುತ್ತದೆ ಹಾಗೂ ರಕ್ತದಲ್ಲಿರುವ ಕಬ್ಬಿಣದ ಅಂಶ ಹೆಚ್ಚಾಗುತ್ತದೆ.

೫. ದುಗ್ಧರಸಗಳ ಚಲನೆಯನ್ನು ಹೆಚ್ಚಿಸುತ್ತದೆ.

೬. ದೇಹದಲ್ಲಿ ಆಮ್ಲದ ಪ್ರಮಾಣವನ್ನು ನಿಯಂತ್ರಿಸುತ್ತದೆ.

೭. ಆಹಾರದಿಂದ ಸುಣ್ಣ ಹಾಗೂ ರಂಜಕವನ್ನು ಹೀರಿಕೊಳ್ಳಲು ದೇಹಕ್ಕೆ ಶಕ್ತಿ ನೀಡುತ್ತದೆ.

೮. ನಿರ್ನಾಳ ಗ್ರಂಥಿಗಳಿಂದ ಥೈರಾಕ್ಸಿನ್ ದ್ರಾವಣ ಉತ್ಪತ್ತಿಯಾಗಲು ಸಹಕರಿಸುತ್ತದೆ.

೯. ದೇಹದ ಉಷ್ಣತೆಯು ಸಮಪಟ್ಟದಲ್ಲಿರಿಸಲು ಸಹಕಾರಿಯಾಗುತ್ತದೆ. ಕೇವಲ ರೋಗಿಗಳೇ ಅಲ್ಲ. ಆರೋಗ್ಯವಂತರೂ ಸಹ ಆರೋಗ್ಯ ರಕ್ಷಣೆಗೆ ಸೂರ್ಯಸ್ನಾನ ಮಾಡಬೇಕು. ಅದು ದರಿಂದಲೇ ಪೂರ್ವಾಚಾರ್ಯರು,

ಆಯುರಾರೋಗ್ಯ ವೃದ್ಧ್ಯರ್ಥಂ
ಸೂರ್ಯ ಸ್ನಾನಂ ಸಮಾಚರೇತ್ ।

ಎಂದು ಹೇಳಿದ್ದಾರೆ.

## ವರ್ಣ ಚಿಕಿತ್ಸೆ

ಸೂರ್ಯನ ಬೆಳಕಿನಲ್ಲಿರುವ ಕೆಲವು ಬಣ್ಣಗಳನ್ನು ಪಯೋಗಿಸಿಕೊಂಡು ಚಿಕಿತ್ಸೆ ನಡೆಸುವುದಕ್ಕೆ 'ವರ್ಣಚಿಕಿತ್ಸೆ' ಎಂದು ಹೆಸರು.

ವರ್ಣಚಿಕಿತ್ಸೆಯ ಸೂರ್ಯಸ್ನಾನ:— ಸೂರ್ಯನಲ್ಲಿರುವ ಊದಾ, ನೇರಳೆ, ನೀಲಿ, ಹಸಿರು, ಹಳದಿ, ಕಿತ್ತಳೆ ಮತ್ತು ಕೆಂಪು ಬಣ್ಣಗಳಲ್ಲಿ ಇಚ್ಛಿತ ವರ್ಣವನ್ನು ದೇಹದ ಮೇಲೆ ಬೀಳುವಂತೆ ಮಾಡುವ ಸ್ನಾನವೇ ವರ್ಣಚಿಕಿತ್ಸೆಯ ಸೂರ್ಯಸ್ನಾನ. ಇದಕ್ಕೆ ಒಂದು ವಿಶೇಷ ವ್ಯವಸ್ಥೆ ಬೇಕು. $2\frac{1}{2}$ ಅಡಿ ಉದ್ದ, $2\frac{1}{2}$ ಅಡಿ ಅಗಲ, ಮತ್ತು 6 ಅಡಿ ಎತ್ತರವಿರುವ ಒಂದು ಮರದ ಪೆಟ್ಟಿಗೆಯನ್ನು ಮಾಡಿಕೊಳ್ಳಬೇಕು. ಅದರೊಳಗೆ ಒಬ್ಬ ವ್ಯಕ್ತಿ ಧಾರಾಳವಾಗಿ ನಿಂತುಕೊಳ್ಳುವಂತಿರಬೇಕು. ಪೆಟ್ಟಿಗೆಯ ಮೇಲ್ಭಾಗದಲ್ಲಿ ನಮಗೆ ಬೇಕಾದ ಬಣ್ಣದ ಗಾಜನ್ನು ಅಳವಡಿಸಿಕೊಳ್ಳುವ ವ್ಯವಸ್ಥೆ ಇರಬೇಕು. ಶೀತರೋಗಿಗಳು ಕೆಂಪು ಬಣ್ಣದ ಗಾಜನ್ನೂ, ಉಷ್ಣರೋಗಿಗಳು ನೀಲಿ ಬಣ್ಣದ ಗಾಜನ್ನೂ ಅಳವಡಿಸಿಕೊಳ್ಳಬೇಕು. ಚರ್ಮರೋಗಿಗಳು, ಹೃದ್ರೋಗಿಗಳು, ಮೂಳೆರೋಗಿಗಳು ಮೂರೂ ಬಣ್ಣದ ಗಾಜುಗಳನ್ನು ದಿನಕ್ಕೊಂದರಂತೆ ಬದಲಾಯಿಸುತ್ತಿರಬೇಕು.

## ಸೂರ್ಯನಲ್ಲಿರುವ ಬಣ್ಣದಿಂದ ಔಷಧಿ ತಯಾರಿಕೆ

ನೀಲಿ, ಹಳದಿ ಮತ್ತು ಕೆಂಪು ಬಣ್ಣವಿರುವ ಮೂರು ಗಾಜಿನ ಸೀಸೆಗಳನ್ನು ತೆಗೆದುಕೊಳ್ಳಿ. ಅದರೆ ಶುದ್ಧವಾದ ಅದೇ ಬಣ್ಣದ ಸೀಸೆಗಳು ಸಿಗದಿದ್ದರೆ ಬಿಳೀ ಸೀಸೆಗಳ ಮೇಲೆ ನೀಲಿ, ಹಳದಿ ಮತ್ತು ಕೆಂಪು ಬಣ್ಣದ ಪಾಲಿಥಿನ್ ಕಾಗದಗಳನ್ನು ಸುತ್ತಬಹುದು.

ಪ್ರತಿಯೊಂದು ಸೀಸೆಯಲ್ಲೂ ಮುಕ್ಕಾಲು ಭಾಗದಷ್ಟು ಶುದ್ಧವಾದ ಜೇನುತುಪ್ಪವನ್ನು ತುಂಬಬೇಕು. ಅನಂತರ ಮುಚ್ಚಳವನ್ನು ಬಿಗಿಯಾಗಿ ಮುಚ್ಚಬೇಕು. ಹೀಗೆ ಜೇನು ತುಂಬಿದ ಸೀಸೆಗಳನ್ನು ಪ್ರತಿದಿನ ಬೆಳಗ್ಗೆಯಿಂದ ಸಾಯಂಕಾಲದವರೆಗೆ ೧೫ ದಿವಸಗಳಕಾಲ ಒಣಮರದ ಹಲಗೆಯ ಮೇಲೆ ಬಿಸಿಲಿನಲ್ಲಿ ಇಡಬೇಕು. ಬಿಸಿಲು ಸಾಮಾನ್ಯವಾಗಿದ್ದರೆ ೨೦ ಅಥವಾ ೨೫ ದಿನಗಳು ಇರಿಸಬೇಕು. ಈ ಅವಧಿಯವರೆಗೆ ಮುಚ್ಚಳವನ್ನು ತೆರೆಯಬಾರದು. ಸಾಯಂಕಾಲ ಸೀಸೆಗಳನ್ನು ಒಳಗೆ ತಂದಿರಿಸುವಾಗ ಒಣಮರದ ಹಲಗೆಯ ಮೇಲೆಯೇ ಇರಿಸಬೇಕು. ಅವಧಿ ಮುಗಿದ ನಂತರ ಒಣಹಲಗೆಯ ಮೇಲೆ ಬೆಳಕು ಹೆಚ್ಚಾಗಿ ಬೀಳದಂತಹ ಶಾಖ ಬೆಳಕು ಕಡಿಮೆ ಇರುವ ಸ್ಥಳದಲ್ಲಿ ಇರಿಸಬೇಕು.

ಸೂರ್ಯನ ಬೆಳಕಿನ ಏಳು ಬಣ್ಣಗಳಲ್ಲಿ ಇತರ ಎಲ್ಲ ಬಣ್ಣಗಳೂ ತಡೆಯಲ್ಪಟ್ಟು, ಸೀಸೆಯ ಬಣ್ಣ ಯಾವುದಿದೆಯೋ ಅದನ್ನು ಮಾತ್ರ ಹರಿಯಬಿಡುತ್ತದೆ. ಇದರಿಂದಾಗಿ ಜೇನಿಗೂ ಮತ್ತು ಆಯಾ ಬಣ್ಣಕ್ಕೂ ರಸಾಯನಿಕ ಕ್ರಿಯೆ ನಡೆದು ಜೇನು ಔಷಧಿಯಾಗಿ ಪರಿವರ್ತನೆಯಾಗುತ್ತದೆ. ಆದರೆ ಜೇನಿನ ರುಚಿಯಲ್ಲಿ ಮಾತ್ರ ಯಾವ ವ್ಯತ್ಯಾಸವೂ ಆಗಿರುವುದಿಲ್ಲ. ಒಮ್ಮೆ ತಯಾರಿಸಿದ ಔಷಧಿಯನ್ನು ಒಂದು ವರ್ಷಕಾಲ ಉಪಯೋಗಿಸಬಹುದು.

ಮೂರು ಬಣ್ಣದ ಸೀಸೆಗಳಲ್ಲೂ ಔಷಧಿಯನ್ನು ಒಮ್ಮೆಲೇ ತಯಾರಿಸಬೇಕೆಂಬ ನಿಯಮವೇನಿಲ್ಲ. ನಮಗೆ ಆವಶ್ಯಕವಿರುವ ಬಣ್ಣದ ಸೀಸೆಗಳಲ್ಲಿ ಮಾತ್ರ ತಯಾರಿಸಿಕೊಳ್ಳಬಹುದು.

## ಔಷಧಿಯ ಉಪಯೋಗ

೧. ಕೆಂಪು ಸೀಸೆಯಲ್ಲಿರುವ ಔಷಧಿಯನ್ನು ಶೀತದಿಂದುಂಟಾದ ನೆಗಡಿ, ಜ್ವರ, ತಲೆನೋವು, ಮೈ ಕೈ ನೋವು, ಕಫ, ಶ್ವಾಸಕೋಶಗಳಲ್ಲಿ ಬೆಳಗ್ಗೆ ಎರಡು ಚಮಚ, ಸಾಯಂಕಾಲ ಎರಡು ಚಮಚ ಕುಡಿಯಲು ಕೊಡಬೇಕು.

(೨) ನೀಲಿ ಸೀಸೆಯಲ್ಲಿರುವ ಔಷಧಿಯನ್ನು ಉಷ್ಣಸಂಬಂಧದ ರೋಗಗಳು ಅಂದರೆ ಕಣ್ಣುರಿ, ಅಂಗೈ ಅಂಗಾಲು ಉರಿ, ಹೊಟ್ಟೆನೋವು, ತಲೆನೋವು ಮುಂತಾದವುಗಳಿಗೆ ಹಿಂದೆ ಹೇಳಿದಂತೆಯೇ ಅನುಪಾನಕ್ರಮ ಅನುಸರಿಸಬೇಕು.

(೩) ಹಳದಿ ಸೀಸೆಯಲ್ಲಿರುವ ಔಷಧಿಯನ್ನು ಸಾಮಾನ್ಯ ಚರ್ಮರೋಗಗಳಾದ ಗಜಕರ್ಣ, ತುರಿ, ಕೂದಲುದುರುವಿಕೆ, ಚರ್ಮ ಬಿರಿಯುವಿಕೆ ಅಲರ್ಜಿ, ಜಂತುಹುಳು ಹೊಟ್ಟೆಯಲ್ಲಿರುವಿಕೆ, ಹಸಿವೆಯಾಗದಿರುವಿಕೆ ಮುಂತಾದ ಸಂದರ್ಭಗಳಲ್ಲಿ ಹಿಂದೆ ಹೇಳಿದಂತೆಯೇ ಸೇವಿಸಬೇಕು.

(೪) ಡಿ–ಅನ್ನಸತ್ತ್ವದ ಕೊರತೆ, ವಿಷಮಶೀತ ಜ್ವರ ಮುಂತಾದ ರೋಗಗಳಲ್ಲಿ ಮೂರೂ ಸೀಸೆಗಳಿಂದ ಎರಡೆರಡು ಚಮಚ ತೆಗೆದುಕೊಂಡು ಬೆರಸಿ ಬೆಳಗ್ಗೆ ಮತ್ತು ಸಾಯಂಕಾಲ ಕೊಡಬೇಕು. ಆಗ ಕೊಡುವ ಔಷಧಿಯನ್ನು ಆಗಲೇ ಮಿಶ್ರ ಮಾಡಿ ಕೊಳ್ಳಬೇಕು.

## ಔಷಧಿ ತಯಾರಿಕೆಯ ಮತ್ತೊಂದು ಕ್ರಮ

ಜೇನಿಗೆ ಬದಲಾಗಿ ಶುದ್ಧವಾದ ನೀರನ್ನು ಹಿಂದೆ ಹೇಳಿದಂತೆಯೇ ತುಂಬಿ ಬಿಸಿಲಿನಲ್ಲಿಟ್ಟು ರೋಗಕ್ಕೆ ಅನುಸಾರದಾಗಿ ಆ ಜಲವನ್ನು ಪಾನ ಮಾಡಬೇಕು. ಪರಿಶುದ್ಧವಾದ ನೀಲಿ, ಹಸಿರು, ಹಳದಿ, ಕಿತ್ತಳೆ, ಗುಲಾಬಿ, ಕಂದು ಮತ್ತು ಕೆಂಪು ಬಣ್ಣದ ಸೀಸೆಗಳಲ್ಲಿ ಮುಕ್ಕಾಲು ಭಾಗ ಶುದ್ಧವಾದ ನೀರು ತುಂಬಿ ಒಂದು ಮರದ ಹಲಗೆಯ ಮೇಲೆ ಪ್ರಾತಃಕಾಲ ೧೦ ಗಂಟೆಯಿಂದ ಸಾಯಂಕಾಲ ೪ ಗಂಟೆಯವರೆಗೆ ಬಿಸಿಲಿನಲ್ಲಿಡಿ. ಬಳಿಕ ಸೀಸೆಗಳನ್ನು ಒಳಕ್ಕೆ ತಂದು ಕಾಗದ ಅಥವಾ ಬಟ್ಟೆಯಲ್ಲಿ ಸುತ್ತಿ ಬೆಳಕು ಬೀಳದಿರುವ ಕಡೆ ಇಡಿ. ಈಗ ನೀರೆಲ್ಲವೂ ಔಷಧಿಯಾಗಿ ಪರಿವರ್ತಿತವಾಗಿರುತ್ತದೆ. ಆಯಾ ರೋಗಗಳಿಗೆ ಅನುಸಾರವಾಗಿ ಸೀಸೆಗಳಲ್ಲಿರುವ ಔಷಧಿಯನ್ನು ಪಾನ ಮಾಡಬೇಕು. ಪ್ರತಿನಿತ್ಯ ಔಷಧಿಯನ್ನು ತಯಾರಿಸಲು ಸಾಧ್ಯವಿಲ್ಲದಿದ್ದರೆ ಮೂರು ಅಥವಾ ನಾಲ್ಕು ದಿನಕ್ಕೊಮ್ಮೆ ತಯಾರಿಸಿ ಕೊಳ್ಳಬಹುದು.

(೧) ದೃಷ್ಟಿದೌರ್ಬಲ್ಯ:– ದೃಷ್ಟಿ ದೌರ್ಬಲ್ಯವಿರುವವರು ಹಸಿರು ಸೀಸೆಯಲ್ಲಿರುವ ಔಷಧಿಯನ್ನು ಪ್ರಾತಃಕಾಲ ೮ ಗಂಟೆಗೆ, ೧೧ ೩೦ ಕ್ಕೆ, ಮಧ್ಯಾಹ್ನ ೩ ಕ್ಕೆ ಮತ್ತು ಸಾಯಂಕಾಲ ೬ ಗಂಟೆಗೆ ಒಂದೊಂದು ಔನ್ಸ್ ಕುಡಿಯಬೇಕು. ಅಂತೆಯೇ ನೀಲಿಸೀಸೆಯಲ್ಲಿರುವ ಔಷಧಿಯನ್ನು ಬೆಳಗ್ಗೆ ೯ಗಂ

ಮಧ್ಯಾಹ್ನ ೧ ಗಂಟೆ ಸಾಯಂಕಾಲ ೪ ಗಂಟೆ ಮತ್ತು ರಾತ್ರಿ ೭ ಗಂಟೆಗೆ ಒಂದೊಂದು ಔನ್ಸ್ ತೆಗೆದುಕೊಳ್ಳಬೇಕು.

(೨) ಖಾಸಶ್ವಾಸ (ಆಸ್ತಮ) :— ದಮ್ಮುರೋಗದವರು ಹಳದಿ ಸೀಸೆಯಲ್ಲಿರುವ ಔಷಧಿಯನ್ನು ೩ ಗಂಟೆಗಳ ಅಂತರದಲ್ಲಿ ದಿನಕ್ಕೆ ೪ ಬಾರಿ ಹೊತ್ತಿಗೆ ೧-೨ ಔನ್ಸ್ ತೆಗೆದು ಕೊಳ್ಳಬೇಕು. ಮಾರನೆ ದಿನ ಕೆಂಪು ಸೀಸೆಯಲ್ಲಿರುವ ಔಷಧಿಯನ್ನು ಹೊತ್ತಿಗೆ ಅರ್ಧ ಔನ್ಸ್‌ನಂತೆ ನಾಲ್ಕು ಹೊತ್ತು ತೆಗೆದು ಕೊಳ್ಳ ಬೇಕು. ಹೀಗೆ ಅನುಕ್ರಮವಾಗಿ ಹಳದಿ ಮತ್ತು ಕೆಂಪು ಸೀಸೆಗಳ ಔಷಧಿಯನ್ನು ಅನುಪಾನ ಮಾಡಬೇಕು.

ರೋಗವು ಉಲ್ಬಣವಾಗಿದ್ದರೆ ಎರಡೂ ಸೀಸೆಗಳಲ್ಲಿರುವ ಔಷಧಿಯನ್ನು ಹೊತ್ತಿಗೆ ಒಂದು ಔನ್ಸ್ ನಂತೆ ೨ ಗಂಟೆಗಳ ಅಂತರದಲ್ಲಿ ದಿನಕ್ಕೆ ೪ ಬಾರಿ ತೆಗೆದುಕೊಳ್ಳಬೇಕು.

ಕೆಮ್ಮು ಕಮ್ಮಿಯಾದಾಗ ಕೆಂಪು ಸೀಸೆಯಲ್ಲಿರುವ ಔಷಧಿಯನ್ನು ತೆಗೆದುಕೊಳ್ಳಬೇಡಿ. ಅಥವಾ ಪ್ರಮಾಣವನ್ನು ಕಡಿಮೆ ಮಾಡಿ.

(೩) ಅಪಸ್ಮಾರ:— ಈ ರೋಗವುಳ್ಳವರು ನೀಲಿ ಸೀಸೆಯಲ್ಲಿರುವ ಔಷಧಿಯನ್ನು ಬೆಳಗ್ಗೆ ೮ ಗಂಟೆಗೆ ೧ರಿಂದ ೨ ಔನ್ಸ್ ಕುಡಿಯಬೇಕು. ಬೆಳಗ್ಗೆ ೧೧- ೩೦ ಕ್ಕೆ ಹಸಿರು ಸೀಸೆಯಲ್ಲಿರುವ ಔಷಧಿಯನ್ನೂ ಮಧ್ಯಾಹ್ನ ೧- ೩೦ ಕ್ಕೆ ನೀಲಿ ಸೀಸೆಯಲ್ಲಿರುವ ಔಷಧಿಯನ್ನೂ ಹಿಂದೆ ಹೇಳಿದ ಪ್ರಮಾಣದಲ್ಲೇ ಕುಡಿಯಬೇಕು.

ರಕ್ತಹೀನತೆ ಇರುವವರು ಕೆಂಪು ಸೀಸೆಯಲ್ಲಿರುವ ಔಷಧವನ್ನು ಪ್ರಾತಃಕಾಲ ೧೧.೩೦ ಕ್ಕೆ ಮತ್ತು ಮಧ್ಯಾಹ್ನ ೩ ಗಂಟೆಗೆ ೧-೨ ಔನ್ಸ್ ಕುಡಿಯಬೇಕು.

ಮಲಬದ್ಧತೆ ಇರುವವರು ಹಳದಿ ಸೀಸೆಯಲ್ಲಿರುವ ಔಷಧವನ್ನು ಪ್ರಾತಃಕಾಲ ಮತ್ತು ರಾತ್ರಿ ಮಲಗುವಾಗ ೧-೨ ಔನ್ಸ್ ಕುಡಿಯಬೇಕು.

(೪) ಮೂಲವ್ಯಾಧಿ :— ನೀಲಿ ಸೀಸೆಯಲ್ಲಿರುವ ಔಷಧಿಯಲ್ಲಲ್ಲಿ ನೆನೆಸಿದ ಶುದ್ಧವಾದ ಬಿಳಿ ಬಟ್ಟೆಯ ಚೂರೊಂದನ್ನು ಗುದದ್ವಾರದಲ್ಲಿದಿನಕ್ಕೆ ಅರ್ಧಗಂಟೆಯಂತೆ ೨೧ ದಿನ ಇಡಿ. ಕಿತ್ತಳೆ ಮತ್ತು ನೀಲಿ ಸೀಸೆಗಳಲ್ಲಿ ತಯಾರಾದ ಔಷಧಿಯನ್ನು ೨ ಗಂಟೆಗೊಂದಾವರ್ತಿ ಹೊತ್ತಿಗೆ ೨ ಔನ್ಸ್ ಕುಡಿಯಿರಿ.

(೫) ಕರುಳುಬಾಲದ ರೋಗ (ಅಪೆಂಡಿಸೈಟಿಸ್) :— ಮೂಲವ್ಯಾಧಿಯಲ್ಲಿ ಹೇಳಿದಂತೆಯೇ ಇಲ್ಲಿಯೂ ಸಹ ಅದೇ ಬಟ್ಟೆಯ ಚೂರನ್ನು ಹೊತ್ತಿಗೆ ೧೫ ನಿಮಿಷದಂತೆ ದಿನಕ್ಕೆ ೩ ಬಾರಿ ೨೧ ದಿವಸದಿಂದ ೩ ತಿಂಗಳವರೆಗೆ ನಾಭಿಯ ಮೇಲೆ ಇಡಿ. ಹಳದಿ ಸೀಸೆಯಲ್ಲಿ ತಯಾರಿಸಿದ ಔಷಧಿಯನ್ನು ಹೊತ್ತಿಗೆ ೨ ಔನ್ಸ್‌ನಂತೆ ದಿನಕ್ಕೆ ೨ ಬಾರಿ ಕುಡಿಯಿರಿ.



(೬) ಅಂಡವಾಯು :— ಕಂದು ಮತ್ತು ಗುಲಾಬಿ ಬಣ್ಣದ ಸೀಸೆಗಳಲ್ಲಿ ತಯಾರಾದ ಔಷಧಿಯನ್ನು ಹೊತ್ತಿಗೆ ೧ ಔನ್ಸ್ ನಂತೆ ಬೆಳಗ್ಗೆ ೧೦-೩೦ ಮಧ್ಯಾಹ್ನ ೩-೩೦ ಮತ್ತು ರಾತ್ರಿ ೮-೩೦ ಕ್ಕೆ ಸೇವಿಸಿ.

(೭) ರಕ್ತಹೀನತೆ :— ಕೆಂಪು ಸೀಸೆಯ ಔಷಧಿಯನ್ನು ದಿನಕ್ಕೆ ನಾಲ್ಕು ಬಾರಿ ಹೊತ್ತಿಗೆ ೧ಔನ್ಸ್ ನಂತೆ ತೆಗೆದುಕೊಳ್ಳಿ. ಹಳದಿ ಸೀಸೆಯಲ್ಲಿನ ಔಷಧಿಯನ್ನು ದಿನಕ್ಕೆ ೨ ಬಾರಿ ಸೇವಿಸಿ. ಇವೆರಡು ಅನುಪಾನಗಳ ನಡುವೆ ಎರಡು ಗಂಟೆ ಅಂತರವಿರಲಿ. ದೇಹದ ಉಷ್ಣತೆ ಹೆಚ್ಚಾದಾಗ ಕೆಂಪು ಸೀಸೆಯ ಔಷಧಿಯನ್ನು ಸೇವಿಸಬೇಡಿ.

(೮) ತೆಳ್ಳಗಿರುವವರು ದಷ್ಟಪುಷ್ಟರಾಗಿ ಶಕ್ತಿಶಾಲಿಗಳಾಗಲು :— ಗುಲಾಬಿ ಬಣ್ಣದ ಸೀಸೆಯಲ್ಲಿ ತಯಾರಾದ ಔಷಧಿಯನ್ನು ಹೊತ್ತಿಗೆ ಒಂದೂವರೆ ಔನ್ಸ್‌ನಂತೆ ದಿನಕ್ಕೆ ೩ ಬಾರಿ ಸೇವಿಸಿ. ಮಾರನೇದಿನ ನೀಲಿ ಸೀಸೆಯ ಔಷಧಿಯನ್ನು ಮೂರು ಬಾರಿ ಸೇವಿಸಿ. ೩ ನೇ ದಿನ ಹಳದಿ ಬಣ್ಣದ ಸೀಸೆಯಲ್ಲಿನ ಔಷಧಿಯನ್ನು ಹೊತ್ತಿಗೆ ಒಂದೂವರೆ ಔನ್ಸ್‌ನಂತೆ ಮೂರು ಹೊತ್ತು ಸೇವಿಸಿ ಹೀಗೆಯೇ ೩ ತಿಂಗಳು ಮುಂದುವರಿಸಿ. ೩ ರಿಂದ ೮ ದಿನಗಳೊಳಗೆ ಗುಣ ಕಾಣುತ್ತದೆ. ಧಾರ್ಮಿಕ ಭಾವನೆಯಿಂದ ಈ ಔಷಧಿಗಳನ್ನು ಅನುಪಾನಮಾಡುವಾಗ ಹೇಳುವ ಸ್ತೋತ್ರ:

ಅಕಾಲ ಮೃತ್ಯು ಹರಣಂ
ಸರ್ವವ್ಯಾಧಿ ನಿವಾರಣಂ ।
ಸೂರ್ಯ ಪಾದೋದಕಂ ತೀರ್ಥಂ
ಜಠರೇ ಧಾರಯಾಮ್ಯಹಂ ॥

ಅಂದರೆ ಅಪಮೃತ್ಯುವನ್ನೂ, ಎಲ್ಲ ರೋಗಗಳನ್ನೂ ನಿವಾರಣೆ ಮಾಡುವ ಈ ಸೂರ್ಯ ತೀರ್ಥವನ್ನು ಅನುಪಾನ ಮಾಡುತ್ತಿದ್ದೇನೆ. ಎಂತಹ ಪವಿತ್ರ ಭಾವನೆ !

ಮಂತ್ರೇ ತೀರ್ಥೇ ದೇವೇ......
ದೈವಜ್ಞೇ ಭೇಷಜೇ ಗುರೌ ।
ಯಾದೃಶೀ ಭಾವನಾ ಯಸ್ಯ
ಸಿದ್ಧಿರ್ಭವತಿ ತಾದೃಶೀ ॥

ಅಂದರೆ ಮಂತ್ರ, ತೀರ್ಥ, ದೇವರು, ಜ್ಯೋತಿಷಿ, ವೈದ್ಯ ಮತ್ತು ಗುರು—ಇವರುಗಳಲ್ಲಿ ನಮ್ಮ ಭಾವನೆಯು ಹೇಗಿರುತ್ತದೆಯೋ ಸಿದ್ಧಿ ಯೂ ಸಹ ಅದಕ್ಕೆ ಅನುಸಾರವಾಗಿಯೇ ಇರುತ್ತದೆ.

ಓಂ ಶ್ರೀ ಸವಿತೃ ಸೂರ್ಯನಾರಾಯಣಾಯ ನಮಃ

# ವಾರ್ತಾವಳಿ

## ದಶಗುಣಿತ ಅಷ್ಟಾವಧಾನ

ಅವಧಾನವೆಂದರೆ ಎಚ್ಚರಿಕೆ, ನೆನಪಿನಲ್ಲಿಟ್ಟು ಕೊಳ್ಳುವಿಕೆ. ಸಂಸ್ಕೃತದಲ್ಲಿ ಅವಧಾನವೆಂಬುದೊಂದು ಸಾಹಿತ್ಯ ಪ್ರಕ್ರಿಯೆ. ಅಲ್ಲೂ ಎಚ್ಚರಿಕೆ, ನೆನಪಿನಲ್ಲಿಟ್ಟುಕೊಳ್ಳುವಿಕೆಗಳು ಮುಖ್ಯ. ಜೊತೆಗೆ ಕವಿತಾರಚನಾಚಾತುರ್ಯ, ವ್ಯುತ್ಪತ್ತಿ ಎಲ್ಲ ಬೇಕು. ಅಷ್ಟಾವಧಾನದಲ್ಲಿ ಒಬ್ಬನೇ ಎಂಟು ಮಂದಿ ಪಂಡಿತರನ್ನು ವಿವಿಧ ರಂಗಗಳಲ್ಲಿ – ನಿಷಿದ್ಧಾಕ್ಷರಿ, ನ್ಯಸ್ತಾಕ್ಷರಿ, ಪುರಾಣಪಠನ, ಆಶುಕವಿತ್ವ, ದತ್ತಪದಿ, ಸಮಸ್ಯೆ, ವರ್ಣನೆ, ಅಪ್ರಸ್ತುತ ಪ್ರಸಂಗಗಳಲ್ಲಿ – ಎದುರುಗೊಂಡು ಎಲ್ಲರನ್ನೂ ಸಾಮಾಧಾನ ಪಡಿಸುವಿಕೆಯಿದ್ದರೆ ಚತುರ್ಗುಣಿತ ಅಷ್ಟಾವಧಾನ ಇಂತಹ ನಾಲ್ಕು ಅಷ್ಟಾವಧಾನಗಳನ್ನು ಒಂದೇ ಕಾಲದಲ್ಲಿ ನಡೆಸುವಿಕೆಯಾಗಿರುತ್ತದೆ. ಇದುವರೆಗೆ ತೆಲುಗಿನಲ್ಲಿ ಇಂತಹ ಚತುರ್ಗುಣಿತ ಅಷ್ಟಾವಧಾನವನ್ನು ವೆಂಕಟಗಿರಿ ರಾಜಾಸ್ಥಾನದಲ್ಲಿ ತಿರುಪತಿ ವೆಂಕಟ ಕವಿಗಳು ನಿರ್ವಹಿಸಿದರೆಂಬುದು ಚರಿತ್ರೆಯಾದರೂ, ದಶಗುಣಿತ ಅಷ್ಟಾವಧಾನವನ್ನು (ಏಕ ಕಾಲದಲ್ಲಿ ಹತ್ತು ಅಷ್ಟಾವಧಾನಗಳು) ಎಲ್ಲೂ ಯಾರೂ ನಿರ್ವಹಿಸಿದ್ದು ದಾಖಲೆಯಾಗಿರಲಿಲ್ಲ. 1985 ರ ಜನವರಿಯಲ್ಲಿ ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಅನ್ನಮಾಚಾರ್ಯ ಪ್ರಾಜೆಕ್ಟಿನ ಶ್ರೀ ಮೇಡಸಾನಿ ಮೋಹನ್ ಅವರು ಒಟ್ಟಿಗೆ ಹತ್ತು ಅಷ್ಟಾವಧಾನಗಳನ್ನು ಯಶಸ್ವಿಯಾಗಿ ನಿರ್ವಹಿಸಿ ಚರಿತ್ರೆಯನ್ನು ಸೃಷ್ಟಿಸಿದರು.

ಇಪ್ಪತ್ತೇಳು ವರ್ಷ ವಯಸ್ಸಿನ ಎಂ. ಎ. ಪದವೀಧರ ಶ್ರೀ ಮೇಡಸಾನಿ ಇದುವರೆಗಾಗಲೇ ಚತುರ್ಗುಣಿತ ಅಷ್ಟಾವಧಾನವನ್ನು ಎರಡು ಬಾರಿಯೂ, ಶತಾವಧಾನವನ್ನು ಒಮ್ಮೆಯೂ ನಿರ್ವಹಿಸಿ, ಒಟ್ಟು ಎಪ್ಪತ್ತೈದಕ್ಕೂ ಮಿಕ್ಕಿ ಅವಧಾನಗಳನ್ನು ನಡೆಸಿದ್ದಾರೆ.

ಜನವರಿ ಹದಿಮೂರರಂದು ಬೆಳಗ್ಗೆ ಅನ್ನಮಾಚಾರ್ಯ ಮಂದಿರ ರಸಿಕಾಗ್ರಣಿಗಳಿಂದ ತುಂಬಿ ಹೋಗಿದ್ದಿತು. ವೇದಿಕೆಯ ಮೇಲೆ 80 ಮಂದಿ ವಿವಿಧ ಕಲಾಕೋವಿದರು, ವ್ಯಾಕರಣ, ತರ್ಕ ವೇದಾಂತ, ಮೀಮಾಂಸ, ದಿಗ್ದಂತಿಗಳು, ಆಂಧ್ರ, ಸಂಸ್ಕೃತ ವಿಶಾರದರು, ಪುರಾಣ ಶಾಸ್ತ್ರಗಳನ್ನು ಅಂಗೈನೆಲ್ಲಿಯನ್ನಾಗಿಸಿಕೊಂಡವರು ಅರ್ಧ ವಲಯಾಕಾರದಲ್ಲಿ ಅವಧಾನಿ ಮೇಡಸಾನಿ ಮೋಹನ್ ಅವರನ್ನು ಕೇಂದ್ರ ಮಾಡಿಕೊಂಡು ಕುಳಿತಿದ್ದರು.



ಅವಧಾನದ ಒಂದು ಚಿತ್ರ– ಎಡದಿಂದ ಶ್ರೀ ಲಕ್ಷ್ಮೀನಾರಾಯಣ, ಶ್ರೀ ಮೇಡಸಾನಿ ಮೋಹನ್ ಡಾ॥ ಜಿ. ಎಸ್. ರೆಡ್ಡಿ.

ಶ್ರೀಮತಿ ಜಯಾಪಶುಪತಿ ಪ್ರಾರ್ಥನೆಯ ನಂತರ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಅವಧಾನವನ್ನು, ಎಸ್. ವಿ. ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ॥ ಜಿ. ಎಸ್. ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಆರಂಭಿಸಿದರು. ತೆಲುಗುಗಂಗೆ ಯೋಜನೆಯ ವಿಶೇಷಾಧಿಕಾರಿ ಶ್ರೀ ಕೆ. ವೆಂಕಟಶಿವಯ್ಯ ಅವರು ಪೃಚ್ಛಕರಿಗೂ ಅವಧಾನಿ ಮೇಡಸಾನಿ ಮೋಹನ್ ಅವರಿಗೂ ಮಧ್ಯೆ ಸಂಧಾತರಾಗಿ ಕಾರ್ಯ ನಿರ್ವಹಿಸಿದರು.

ರಾತ್ರಿ ಎಂಟುಗಂಟೆಗೆ ಮುಗಿದ ದಶಗುಣಿತ ಅಷ್ಟಾವಧಾನ ಕಾರ್ಯಕ್ರಮದ ಕೊನೆಯಲ್ಲಿ ಆಂಧ್ರಪ್ರದೇಶದ ವಿದ್ಯಾಮಂತ್ರಿ ಶ್ರೀ ಮುದ್ದುಕೃಷ್ಣನಾಯುಡು ಅವರು ಶ್ರೀ ಮೋಹನ್ ಅವರಿಗೆ ಸ್ವರ್ಣಕಂಕಣವನ್ನು ತೊಡಿಸಿ ಜೋಡಿಶಾಲುವಿನಿಂದ ಸನ್ಮಾನಿಸಿದರು. ತಿ. ತಿ. ದೇ ಹಾಗೂ ತಿರುಪತಿಯ ಫೈನ್ ಆರ್ಟ್ಸ್ ಅಕಾಡಮಿ ಅವರ ಸಂಯುಕ್ತ ಆಶ್ರಯದಲ್ಲಿ ನಡೆದ ಕಾರ್ಯಕ್ರಮದಲ್ಲಿ ಶ್ರೀ ಮೋಹನ್ ಅವರಿಗೆ ಫೈನ್ ಆರ್ಟ್ಸ್‌ನವರಿಂದ 'ಅವಧಾನ ಚಕ್ರವರ್ತಿ' ಎಂಬ ಬಿರುದು ಸಂದಿತು.

---



ಹಿಂದೂ ಧರ್ಮ ಸಂಸ್ಥೆಯವರಿಂದ ನಡೆಸಲಾದ ಪುರಾಣ ಪರಿಚಯ ಪರೀಕ್ಷೆಗಳ ರಾಷ್ಟ್ರ ಮಟ್ಟದ ರ್‍ಯಾಂಕ್ ವಿದ್ಯಾರ್ಥಿಗಳಿಗೆ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್ ಲಕ್ಷ್ಮೀನಾರಾಯಣ ಅವರು ಬಹುಮಾನ ವಿತರಣೆ ಮಾಡಿದರು. ಬಲದಿಂದ ಕ್ರಮವಾಗಿ ಮೊದಲ ಮೂರು ರ್‍ಯಾಂಕ್ ಪಡೆದ ವಿದ್ಯಾರ್ಥಿನಿಯರು 1. ಕು॥ ಕೆ. ಪ್ರಭಾವತಿ 2. ಕು॥ ಪಿ ರಾಧಿಕಾ 3. ಕು॥ ಜಿ. ಪದ್ಮ.

## ವಿಗ್ರಹಗಳ ದಾನ

ಬೆಂಗಳೂರಿನ ರಂಗನಾಥಸ್ವಾಮಿ ದೇವಾಲಯದಲ್ಲಿ ಪ್ರತಿಷ್ಠಾಪನೆ ಮಾಡಲೆಂದು ರಂಗನಾಥಸ್ವಾಮಿ ಹಾಗೂ ಶ್ರೀದೇವಿ ಭೂದೇವಿಯರ ವಿಗ್ರಹಗಳನ್ನು ತಿ. ತಿ. ದೇ. ಜನವರಿ ತಿಂಗಳಿನಲ್ಲಿ ದಾನ ನೀಡಿತು.

ತಿ. ತಿ. ದೇ. ಗಳ ಶಿಲ್ಪ ಶಿಕ್ಷಣ ಶಾಲೆಯವರು ತಯಾರಿಸಿದ ಈ ಕರಿಕಲ್ಲಿನ ವಿಗ್ರಹಗಳ ತಯಾರಿಕೆಗಾಗಿ ಆದ ವೆಚ್ಚ ಸುಮಾರು ರೂ. 80,000 ಎನ್ನಲಾಗಿದ್ದು, ಹಿಂದೂ ಧರ್ಮದ ಪ್ರಸಾರದ ಯೋಜನೆಯಲ್ಲಿ ತಿ. ತಿ. ದೇ. ಗಳ ನೆರವುನೀಡುವ ಯೋಜನೆಯನ್ವಯ ಈ ವಿಗ್ರಹಗಳನ್ನು ನೀಡಲಾಗಿದೆ.

## ಪಂಡಿತ ಜಗ್ಗು ಶಿಂಗ್ರೈಂಗಾರ್ ನಿಧನ

ಪ್ರಖ್ಯಾತ ಸಂಸ್ಕೃತ ವಿದ್ವಾಂಸರೂ, ಕನ್ನಡ ಸಂಸ್ಕೃತಗಳೆರಡರಲ್ಲೂ ಶ್ರೇಷ್ಠ ಕೃತಿಕಾರರೂ ಆಗಿದ್ದ ವಿದ್ವಾನ್ ಶ್ರೀ ಜಗ್ಗು ಶಿಂಗ್ರೈಂಗಾರ್ ಅವರು ಜನವರಿಯಲ್ಲಿ ತುಮಕೂರಿನಲ್ಲಿ ನಿಧನರಾದರು.

94 ವರ್ಷ ವಯಸ್ಸಿನ ಶ್ರೀಯುತರು ವಿದ್ಯಾ ಇಲಾಖೆಯಲ್ಲಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದರು. ಎಂಟು ಮಂದಿ ಪುತ್ರಿಯರು ಹಾಗೂ ಒಬ್ಬ ಪುತ್ರನನ್ನು ಅವರು ಅಗಲಿದ್ದಾರೆ. ಸುಮಾರು 60 ಸಂಸ್ಕೃತ ಹಾಗೂ 10 ಕನ್ನಡ ಕೃತಿಗಳನ್ನೂ ರಚಿಸಿದ್ದಾರೆ.

ಶ್ರೀ ಜಗ್ಗು ಶಿಂಗ್ರೈಂಗಾರ್ ಅವರಿಗೆ ಕರ್ನಾಟಕ ರಾಜ್ಯ ಪ್ರಶಸ್ತಿಯೂ ಶ್ರೀ ಶೃಂಗೇರಿ ಜಗದ್ಗುರುಗಳ ಸನ್ಮಾನವೂ ಲಭಿಸಿದ್ದು ಅವರ ಅಗಲಿಕೆಯಿಂದ ಕರ್ನಾಟಕದ ಧಾರ್ಮಿಕ ಜಗತ್ತಿನ ಒಬ್ಬ ಮಾರ್ಗದರ್ಶಿಯ ಕೊರತೆಯುಂಟಾಗಿದೆ.

## ನೇತ್ರ ಚಿಕಿತ್ಸಾಶಿಬಿರ

ತಿರುಪತಿಯಲ್ಲಿ ತಿ. ತಿ. ದೇ. ಗಳ ವತಿಯಿಂದ ಜನವರಿ ತಿಂಗಳಿನಲ್ಲಿ ಯಶಸ್ವಿಯಾಗಿ ನೇತ್ರ ಚಿಕಿತ್ಸಾ ಶಿಬಿರ ನಡೆಯಿತು. ಹೈದರಾಬಾದಿನ ಸರೋಜಿನೀದೇವಿ ಕಣ್ಣಿನ ಆಸ್ಪತ್ರೆಯ ವಿಖ್ಯಾತ ವೈದ್ಯರುಗಳಾದ ಡಾ॥ ಪಿ. ಶಿವಾರೆಡ್ಡಿ, ಡಾ॥ ಪಿ. ರಂಗಾರೆಡ್ಡಿ, ಡಾ॥ ಎ. ವಿ. ನರಸಿಂಹರಾವ್ ಅವರುಗಳು ತಿ. ತಿ. ದೇ. ವೈದ್ಯರುಗಳ ಜೊತೆಗೆ ಶಿಬಿರವನ್ನು ನಿರ್ವಹಿಸಿದರು. ತಿರುಪತಿಯ ಶ್ರೀ ಕೋದಂಡರಾಮಸ್ವಾಮಿ ಸತ್ರದಲ್ಲಿ ನಡೆದ ಈ ಶಿಬಿರದಲ್ಲಿ ಸುಮಾರು ಎರಡು ಸಾವಿರ ಮಂದಿಯನ್ನು ಪರೀಕ್ಷಿಸಿ ಚಿಕಿತ್ಸೆಯನ್ನು ನೀಡಲಾಯಿತು.

ಶಸ್ತ್ರ ಚಿಕಿತ್ಸೆಗಳನ್ನು ನಡೆಸುವ ಮುನ್ನ ನಡೆದ ಶಿಬಿರದ ಔಪಚಾರಿಕ ಉದ್ಘಾಟನಾ ಸಮಾರಂಭದಲ್ಲಿ ಆಂಧ್ರಪ್ರದೇಶದ ವಿದ್ಯಾಶಾಖಾ ಉಪ ಮಂತ್ರಿ ಶ್ರೀ ಮುದ್ದುಕೃಷ್ಣ ನಾಯುಡು ಅವರ ಅಧ್ಯಕ್ಷತೆಯಲ್ಲಿ ಉದ್ಘಾಟನಾ ಭಾಷಣ ಮಾಡುತ್ತ ಆಂಧ್ರಪ್ರದೇಶದ ರಾಜ್ಯಪಾಲ ಡಾ॥ ಶಂಕರದಯಾಳಶರ್ಮ ಅವರು ತಿರುಪತಿಯಲ್ಲಿ ಒಂದು ಕಣ್ಣಿನ ಆಸ್ಪತ್ರೆಯನ್ನು ತೆರೆಯಬೇಕೆಂದು ಸಲಹೆ ನೀಡಿದರು. ಅಧ್ಯಕ್ಷ ಭಾಷಣದಲ್ಲಿ ಶ್ರೀ ಮುದ್ದುಕೃಷ್ಣ ನಾಯುಡು ಅವರು 'ತಾವು ಡಾ॥ ಶಿವಾರೆಡ್ಡಿ ಹಾಗೂ ಮುಖ್ಯಮಂತ್ರಿ ಎನ್. ಟಿ. ರಾಮಾರಾವ್ ಅವರುಗಳೊಂದಿಗೆ ಈ ವಿಷಯದಲ್ಲಿ ಚರ್ಚೆ ನಡೆಸುವುದಾಗಿ, ಭರವಸೆ ನೀಡಿದರು.

ವರದಿಯನ್ನು ಓದುತ್ತ ತಿ. ತಿ. ದೇ. ವೈದ್ಯಾಧಿಕಾರಿ ಡಾ॥ ವೈ. ಆರ್. ಧನಲಕ್ಷ್ಮಿ ಅವರು ತಿ. ತಿ. ದೇ. ನಡೆಸುತ್ತಿರುವ ಈ ಶಿಬಿರ 24ನೆಯದೆಂದು ನುಡಿದರು. ಪೌರಸಂಬಂಧ ಶಾಖಾಧಿಕಾರಿ ಡಾ॥ ರಾವುಲ ಸೂರ್ಯನಾರಾಯಣಮೂರ್ತಿಯವರು ಮಾತನಾಡುತ್ತ ತಿ. ತಿ. ದೇ. ಈ ದಿಸೆಯಲ್ಲಿ ಕೈಗೊಂಡಿರುವ ಹಲವಾರು ಕಾರ್ಯಕ್ರಮಗಳನ್ನು ವಿವರಿಸಿದರು.

ಶಸ್ತ್ರ ಚಿಕಿತ್ಸೆ ಹೊಂದಿದ ರೋಗಿಗಳಿಗೂ ಅವರ ನೆರವಿಗರಿಗೂ ತಿ. ತಿ. ದೇ. ಉಚಿತ ಊಟ ವಸತಿಗಳನ್ನೇರ್ಪಡಿಸಿದ್ದಿತು.

## ಜನವರಿ ೧ ರ ತಿರುಮಲೆ

1985 ರ ಜನವರಿ 1 ರಂದು 1 ಲಕ್ಷಕ್ಕೂ ಮೀರಿದ ಜನ ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿದರು. ಅಂದು ಪ್ರಸಾದಗಳ ಮಾರಾಟದಿಂದ 4.71 ಲಕ್ಷ ರೂ.ಗಳೂ ಹುಂಡಿಯಿಂದ 8.51 ಲಕ್ಷ ರೂ.ಗಳೂ ವಿಶೇಷ ಪ್ರವೇಶದ ಟಿಕೆಟ್ ಮಾರಾಟದಿಂದ 2.88 ಲಕ್ಷ ರೂ.ಗಳೂ ಆದಾಯವಾಗಿ ಒಟ್ಟು ರೂ. 16.10 ಲಕ್ಷದ ಮೊತ್ತ ಸಂಗ್ರಹವಾಯಿತು.

ಅಂದು ಮೊದಲಬಾರಿಗೆ ಹೊಸ ಕ್ಯೂ ಕಾಂಪ್ಲೆಕ್ಸ್ ಮೂಲಕ ದರ್ಶನಾರ್ಥಿಗಳು ಹೊರಟು ದೇವಾಲಯದ ಮುಖದ್ವಾರವನ್ನು ತಲುಪಿದರು. ಹಳೆಯ ಕ್ಯೂಷೆಡ್‌ಗಳಲ್ಲಿ 8 ಹಾಗೂ ಹೊಸ ಕ್ಯೂ ಕಾಂಪ್ಲೆಕ್ಸ್‌ನಲ್ಲಿ 17 ಕ್ಲೋಸ್‌ಡ್ ಸರ್ಕ್ಯೂಟ್ ಟಿ. ವಿ. ಗಳನ್ನು ಏರ್ಪಡಿಸಿದ್ದು ಭಕ್ತರು ಭಜನೆ ಕಾರ್ಯಕ್ರಮಗಳನ್ನು ವೀಕ್ಷಿಸಲು ಅನುಕೂಲ ಮಾಡಿ ಕೊಡಲಾಗಿದ್ದಿತು.

ಹೆಚ್ಚಿನ ಜನಸಂದಣಿಯನ್ನು ಶಾಂತ ರೀತಿಯಿಂದ ನಿಯಂತ್ರಿಸಲು ಹಾಗೂ ಅವರ ಅವಶ್ಯಕತೆಗಳನ್ನು ಪೂರೈಸಲು ತಿ. ತಿ. ದೇ. ಅಧಿಕಾರಿಗಳ ಒಂದು ವ್ಯಾಪಕ ಜಾಗೃತ ಜಾಲವನ್ನು ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರ ನೇತೃತ್ವದಲ್ಲಿ ಏರ್ಪಡಿಸಲಾಗಿದ್ದಿತು. ವಿಶೇಷ ಪ್ರಸಾದ ಮಾರಾಟ ಕೇಂದ್ರಗಳು, ವಾಹನ ನಿಲ್ದಾಣ ಕೇಂದ್ರಗಳು, ನೀರಿನ ಕೇಂದ್ರಗಳು ಏರ್ಪಾಡಾಗಿದ್ದವು.

## ಭಾರತೀಯ ವೈದ್ಯವಿಶ್ವಕೋಶದ ಪ್ರಕಟನೆ

ಜನವರಿ 19 ರಂದು ಬೆಂಗಳೂರಿನಲ್ಲಿ ಬೊಂಬಾಯಿಯ ಪಾಪ್ಯುಲರ್ ಪ್ರಕಾಶನದವರು ಡಾ॥ ವಿ. ಪರಮೇಶ್ವರ ಧಾರ್ಮಿಕ ದತ್ತಿಯ ಪರವಾಗಿ 'ಭಾರತೀಯ ವೈದ್ಯವಿಶ್ವಕೋಶ'ದ ಪ್ರಥಮ ಸಂಪುಟವನ್ನು ಪ್ರಕಟಿಸಿದರು.

ಆಧುನಿಕ ನಾಗರಿಕತೆಯ ವಾತಾವರಣದಲ್ಲಿ ಬೆಳೆದ ಮನಸ್ಸಿಗೆ ತಲುಪುವ ರೀತಿಯಲ್ಲಿ ಪ್ರಾಚೀನ



ನೇತ್ರಚಿಕಿತ್ಸಾಶಿಬಿರದ ಮೂರು ಚಿತ್ರಗಳು : ಉದ್ಘಾಟನೆಯಲ್ಲಿ ಮಾತನಾಡುತ್ತಿರುವ ಶ್ರೀ ಎಸ್. ಲಕ್ಷ್ಮೀನಾರಾಯಣ, ಮಧ್ಯದಲ್ಲಿ ಶಿಬಿರದಲ್ಲಿ ಶಸ್ತ್ರಚಿಕಿತ್ಸೆ ಹೊಂದಿದವರು. ಬಲಕ್ಕೆ- ನೇತ್ರ ಪರಿಶೀಲನೆಯಲ್ಲಿ ನೇತ್ರಜ್ಞರು.

ಜ್ಞಾನವನ್ನು ಹರಡಲು ಅನುವಾಗುವಂತೆ ಆರು ಸಂಪುಟಗಳಲ್ಲಿ ಭಾರತೀಯ ವೈದ್ಯ ವಿಶ್ವಕೋಶ ವನ್ನು ಹೊರತರಲು ನಿಶ್ಚಯಿಸಲಾಗಿದ್ದು ಮೊದಲ ಸಂಪುಟ ಈಗ ಬಿಡುಗಡೆ ಯಾಗುತ್ತಿದೆ. ಮೊದಲ ಸಂಪುಟದ ಹಿಂದೆಯೇ ತ್ವರೆಯಾಗಿ ಉಳಿದ ಐದು ಸಂಪುಟಗಳೂ ವೈದ್ಯಜಗತ್ತಿಗೆ ದೊರೆಯುತ್ತವೆ. ಎಂದು ಸಭೆಯನ್ನು ಸ್ವಾಗತಿಸಿದ ಡಾ॥ ಪರಮೇಶ್ವರನ್ ಅವರು ತಿಳಿಸಿದರು.

ಪುಸ್ತಕವನ್ನು ಬಿಡುಗಡೆ ಮಾಡಿದ ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯ ಡಾ॥ ಸಿ. ಎನ್. ಆರ್. ರಾವ್ ಅವರು 'ಪ್ರಾಚೀನ ಭಾರತೀಯ ತಿಳುವಳಿಕೆಯನ್ನು ಇಂದಿನ ಬದುಕಿಗೆ ಹೊಂದಿಸಿ ಕೊಳ್ಳಲು ವಿಶ್ವಕೋಶ ಸಹಕಾರಿಯಾಗಿದೆ, ಇದು ವೈದ್ಯ ಜಗತ್ತಿಗೆ ನೀಡಿದ ಒಂದು ಉತ್ತಮ ಕಾಣಿಕೆ' ಎಂದು ಶ್ಲಾಘಿಸಿದರು.

ವಿಶ್ವಕೋಶದ ಸಂಪಾದಕ ಪ್ರೊ॥ ಎಸ್. ಕೆ. ರಾಮಚಂದ್ರರಾಯರು ಮಾತನಾಡುತ್ತ 'ಭಾರತೀಯರ ಪ್ರಾಚೀನವೂ ಬಹುತುಲ್ಯವೂ ಆದ ಸ್ವಾಸ್ಥ್ಯದೃಷ್ಟಿ ಜಗತ್ತಿಗೆ ತಿಳಿದಿಲ್ಲ. ಭಾರತ ದಲ್ಲೂ ಈ ಉನ್ನತ ಪರಂಪರೆ ಸಮುದಾಯದ ಮೇಲೆ ತನ್ನ ಹತೋಟಿಯನ್ನು ಕಳೆದು ಕೊಳ್ಳುತ್ತಿದೆ. ಆಯುರ್ವೇದವನ್ನೇ ಅಭ್ಯಾಸ ಮಾಡುವ ವೈದ್ಯರಿಗೂ ಗ್ರಂಥ ಸಾಮಗ್ರಿಯ ಜೊತೆ ಸಂಪರ್ಕ ಕಡಿದು ಹೋಗುತ್ತಿದೆ'ಯೆಂದು ತಿಳಿಸಿ, 'ಇದು ವಿಶ್ವದ ತಿಳಿವಿನ ಕೋಶಕ್ಕೆ ಸಲ್ಲು ತ್ತಿರುವ ಕಾಣಿಕೆ'ಯೆಂದೂ, ಈ ಸಂಪುಟಗಳನ್ನು ಆಧುನಿಕ ವೈದ್ಯ ವಿಜ್ಞಾನದ ಬೆಳಕಿನಲ್ಲಿ ಸಮೀಕ್ಷಿಸಿ ಇದರ ಮೌಲ್ಯ ಮಾಪನ ಮಾಡಲು ದೊರಕಿಸಿದ ಅವಕಾಶವೆಂದೂ ನುಡಿದರು.

ವಿಜ್ಞಾನಿಗಳಿಬ್ಬರ ನಡುವಿನ ಚಿಂತನೆಯ ಅಂತರ ಕ್ರಿಯೆಯ ಫಲ ವಿಶ್ವಕೋಶವೆಂದೂ, ಯೋಜನೆ ಯನ್ನು ರೂಪಿಸಿದ ಡಾ॥ ಪರಮೇಶ್ವರ ಮತ್ತು ಅದನ್ನು ಕಾರ್ಯರೂಪಕ್ಕೆ ತಂದ ಪ್ರೊ॥ ರಾಮ ಚಂದ್ರರಾಯರಿಬ್ಬರನ್ನೂ ಅಭಿನಂದಿಸಿದ ಭಾರತೀಯ ವೈದ್ಯರ ಸಂಘದ ಅಧ್ಯಕ್ಷ ಡಾ॥ ಬಿ. ಬಿ. ತ್ರಿಪಾಠಿಯವರು ಇಂತಹ ಉದಾತ್ತ ಕಾರ್ಯಗಳಿಂದ ನಮ್ಮ ರಾಷ್ಟ್ರೀಯ ವ್ಯಕ್ತಿತ್ವದ ಅಸಾಮಾನ್ಯ ಸ್ವರೂಪ ವ್ಯಕ್ತಗೊಳ್ಳುತ್ತದೆ. ಇಂತಹ ಕಾರ್ಯಗಳು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಗಮನ ಸೆಳೆದು ಇಡೀ ಜಗತ್ತಿಗೇ ಇದರ ಲಾಭವುಂಟಾಗಲಿ ಎಂದು ಹಾರೈಸಿದರು.

ಪುಸ್ತಕ ಪ್ರಕಟನಾ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಕರ್ನಾಟಕದ ವಾರ್ತಾ ಇಲಾಖಾ ಮಂತ್ರಿ ಶ್ರೀ ಜೀವರಾಜ ಆಳ್ವ ಅವರು ಮಾತ ನಾಡುತ್ತ 'ಇದರಿಂದ ಪ್ರಾಚೀನ ವೈದ್ಯ ವಿದ್ಯೆಯ ಮಹತ್ತನ್ನು ತಿಳಿಯಲು ಆಧುನಿಕರು ಅನುಭವಿಸು ತ್ತಿದ್ದ ತೊಡಕನ್ನು ನಿವಾರಿಸಿದಂತಾಗಿದೆಯೆಂದೂ, ರಾಜ್ಯ ಸರ್ಕಾರ ಇದರ ಯಶಸ್ಸಿಗೆ ನೆರವಾಗಲಿದೆ' ಎಂದೂ ಆಶ್ವಾಸನೆ ನೀಡಿದರು.

(ಕೃಪೆ: ಕನ್ನಡಪ್ರಭ.)

## ಹರಿದಾಸ ಸಾಹಿತ್ಯೋತ್ಸವ

1985 ಜನವರಿ 2 ರಿಂದ 6 ರವರೆಗೆ ಐದು ದಿನಗಳ ಕಾಲ ಹುಬ್ಬಳ್ಳಿಯಲ್ಲಿನ ಗುಜರಾತ್ ಭವನದಲ್ಲಿ ಕುಮಾರವ್ಯಾಸ ಜಯಂತ್ಯುತ್ಸವದ ಅಂಗವಾಗಿ ಹರಿದಾಸ ಪರಂಪರಾದರ್ಶನ ಹಾಗೂ ಹರಿದಾಸ ಸಾಹಿತ್ಯೋತ್ಸವ ಯಶಸ್ವಿಯಾಗಿ ನಡೆದವು.



ಉದ್ಘಾಟನೆಯಲ್ಲಿ ಮಾತನಾಡುತ್ತಿರುವ ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗ್ಗಡೆ.



ಮೇಲಿನ ಚಿತ್ರಗಳಲ್ಲಿ ಮೊದಲಿಗೆ ದಾಸ ಸಾಹಿತ್ಯ ಪ್ರದರ್ಶನವನ್ನು ವೀಕ್ಷಿಸುತ್ತಿರುವ ಶ್ರೀ ವೀರೇಂದ್ರ ಹೆಗ್ಗಡೆ, ಶ್ರೀ ಸುರೇಂದ್ರದಾನಿ ಮೊದಲಾದವರು. ನಡುವೆ ಪುರಂದರೋಪನಿಷತ್ ಪುಸ್ತಕವನ್ನು ಬಿಡುಗಡೆ ಮಾಡುತ್ತಿರುವ ಶ್ರೀ ಪಂಡರೀನಾಥಾಚಾರ್ಯಗಲಗಲಿ. ನಂತರ ಸಮಾರೋಪ ಭಾಷಣ ಮಾಡುತ್ತಿರುವ ಶ್ರೀ ಮೂರುಸಾವಿರ ಮಠದ ಶ್ರೀ ಶ್ರೀಗಳು.

## ಮುಂದಿನ ಸಂಚಿಕೆಯಲ್ಲಿ .... .... ....

### ಸಪ್ತಗಿರಿ ಮಾರ್ಚ್ — 1985

**ವಾದಿರಾಜರು**
ಬಿ. ಬಸವರಾಜ ಶೇಟ್

**ವ್ಯಾಸರಾಯರ ಕೀರ್ತನೆಗಳ ಶೈಲಿ**
– ಡಾ॥ ಕೆ. ಗೋಕುಲನಾಥ್

**ಕನ್ನಡದಲ್ಲಿ ರಾಮಾಯಣಗಳು**
– ಡಾ॥ ಎನ್. ಅನಂತರಂಗಾಚಾರ್

**ಶ್ರೀರಾಮ ಪಟ್ಟಾಭಿಷೇಕ**
– ಡಿ. ಕೃಷ್ಣ ಅಯ್ಯಂಗಾರ್

**ಕಾತ್ಯಾಯನಿ**
– ರಘುಸುತ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ — ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

## ತಿಂಗಳಿನ ಮುಖ್ಯದಿನಗಳು

### ಮಾರ್ಚ್ 1985

| | | |
|---|---|---|
| 2 | ಶನಿವಾರ | ತಿರುಮಲೆ ಶ್ರೀ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವಾರಂಭ |
| 3 | ಭಾನುವಾರ | ಕುಲಶೇಖರಾಳ್ವಾರ್ ವರ್ಷ ತಿರುನಕ್ಷತ್ರ |
| 6 | ಬುಧವಾರ | ಕುಮಾರಧಾರಾ ತೀರ್ಥಮುಕ್ಕೋಟಿ, ಶ್ರೀ ವೆಂಕಟೇಶ್ವರ – ಸ್ವಾಮಿ ತೆಪ್ಪೋತ್ಸವ ಸಮಾಪ್ತಿ, ಹೋಳಿ ಹಬ್ಬ |
| 14 | ಗುರುವಾರ | ಮೀನಸಂಕ್ರಮಣ |
| 19 | ಮಂಗಳವಾರ | ತಿರುಪತಿ ಶ್ರೀ ಕೋದಂಡರಾಮಸ್ವಾಮಿ – ಬ್ರಹ್ಮೋತ್ಸವಾರಂಭ ಅಂಕುರಾರ್ಪಣೆ |
| 22 | ಶುಕ್ರವಾರ | ಉಗಾದಿ, ತಿರುಮಲೆಯಲ್ಲಿ ಉಗಾದಿ ಆಸ್ಥಾನ |
| 24 | ಭಾನುವಾರ | ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವದ ಗರುಡೋತ್ಸವ |
| 25 | ಸೋಮವಾರ | ನಾಗಲಾಪುರಂ ಶ್ರೀ ವೇದನಾರಾಯಣಸ್ವಾಮಿ – ತೆಪ್ಪೋತ್ಸವಾರಂಭ |
| 27 | ಬುಧವಾರ | ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವದ ರಥೋತ್ಸವ ನಾಗಲಾಪುರ ಶ್ರೀ ವೇದನಾರಾಯಣಸ್ವಾಮಿ – ತೆಪ್ಪೋತ್ಸವ ಸಮಾಪ್ತಿ |
| 28 | ಗುರುವಾರ | ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವ ಅವಭೃತ |
| 30 | ಶನಿವಾರ | ಶ್ರೀರಾಮನವಮಿ |

ಜನವರಿ ಎರಡರ ಸಂಜೆ ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗ್ಗಡೆಯವರ ಅಧ್ಯಕ್ಷತೆಯಲ್ಲಿ ಕರ್ನಾಟಕ ಸಂಸ್ಕೃತಿ ಅಭಿವೃದ್ಧಿ ಇಲಾಖೆಯ ಶ್ರೀ ಐ. ಎಂ. ವಿಠಲಮೂರ್ತಿ ಅವರು ಸಾಹಿತ್ಯೋತ್ಸವವನ್ನೂ, ವಸ್ತು ಪ್ರದರ್ಶನವನ್ನೂ ಉದ್ಘಾಟಿಸುತ್ತ 'ಹರಿದಾಸ ಸಾಹಿತ್ಯ ಪ್ರಸಾರಕ್ಕಾಗಿ ಕರ್ನಾಟಕವು ಶೀಘ್ರದಲ್ಲೇ ದಾಸಸಾಹಿತ್ಯ ಅಕಾಡಮಿಯ ನಿರ್ಮಿಸುವುದೆ'ಂದೂ ತಿಳಿಸಿದರು. ಅದೇ ಇಲಾಖೆಯ ಶ್ರೀ ಕಾ. ತಿ. ಚಿಕ್ಕಣ್ಣ ಅವರು ಕನಕದಾಸ ಹಾಗೂ ಅವರ ಪರಂಪರೆಯ ಬಗ್ಗೆ ಉಪನ್ಯಾಸ ಮಾಡಿದರು. ಅಂದು ಕಾಖಂಡಕಿಯ ಹರಿದಾಸ ಶ್ರೀ ಶ್ರೀಪತಯ್ಯ ಅವರನ್ನು ಸನ್ಮಾನಿಸಲಾಯಿತು.

ಗುರುವಾರ ಸಂಜೆ ಶ್ರೀ ಬಿ. ಡಿ. ಪಾಠಕ್ ಅವರ ಅಧ್ಯಕ್ಷತೆಯಲ್ಲಿ ಡಾ॥ ಆರ್. ಸತ್ಯನಾರಾಯಣರಾಯರು ದಾಸಸಾಹಿತ್ಯ ಹಾಗೂ ಸಂಗೀತ ಎಂಬ ವಿಷಯದಲ್ಲಿ ಭಾಷಣ ಮಾಡಿದರು. ಕಾಖಂಡಕಿ ಅಣ್ಣಯ್ಯಾಚಾರ್ಯರನ್ನು ಸನ್ಮಾನಿಸಲಾಯಿತು. ನಾಲ್ಕರಂದು ಸಂಜೆ ಶ್ರೀ ಪಂಢರೀನಾಥಾಚಾರ್ಯಗಲಗಲಿಯವರ ಅಧ್ಯಕ್ಷತೆಯಲ್ಲಿ ಡಾ॥ ಗುರುಲಿಂಗ ಕಾಪಸೆ ಅವರು ದಾಸಸಾಹಿತ್ಯ ಮತ್ತು ಶರಣ ಸಾಹಿತ್ಯದ ಬಗ್ಗೆ ಉಪನ್ಯಾಸ ನೀಡಿದರು. ಶ್ರೀಮತಿ ಲತಾ ಜಹಗೀರದಾರ್ ಅವರ ಸಂಗೀತಸಭೆ ನಡೆಯಿತು. ಶ್ರೀಮತಿ ಗಂಗೂಬಾಯಿ ಹಾನಗಲ್ ಅವರನ್ನು ಸನ್ಮಾನಿಸಲಾಯಿತು. ಶನಿವಾರ ಸಂಜೆ ಕರ್ನಾಟಕ ಧಾರ್ಮಿಕದತ್ತಿ ಇಲಾಖೆಯ ನಿರ್ದೇಶಕ ಶ್ರೀ ಎಸ್. ವಿಠಲರಾವ್ ಅವರ ಅಧ್ಯಕ್ಷತೆಯಲ್ಲಿ ಶ್ರೀ ಎನ್ಕೆ ಯವರು ಮಾತನಾಡಿದರು. ಭಾನುವಾರದ ಸಮಾರೋಪ ಸಮಾರಂಭದಲ್ಲಿ ಮೂರುಸಾವಿರ ಮಠದ ಶ್ರೀ ಶ್ರೀಗಳ ಅಧ್ಯಕ್ಷತೆಯಲ್ಲಿ ಪ್ರೊ॥ ಕೆ. ಟಿ. ಪಾಂಡುರಂಗಿ ಅವರು ಉಪನ್ಯಾಸ ನೀಡಿದರು.

ಮೂರುದಿನವೂ ಶ್ರೀ ಹಂಡೇಗುರು ವೇದವ್ಯಾಸದಾಸರಿಂದ ಶ್ರೀನಿವಾಸ ಕಲ್ಯಾಣ ಹರಿಕಥೆ ನಡೆಯಿತು. ಶ್ರೀ ವೆಂಕಟೇಶ್ವರ ಭಜನಾಮಂಡಲಿ (ಧಾರವಾಡ) ಶ್ರೀ ಶಾರದಾಭಜನಾಮಂಡಳಿ (ಹುಬ್ಬಳ್ಳಿ) ಶ್ರೀ ರಾಘವೇಂದ್ರ ಭಜನಾಮಂಡಳಿಯವರಿಂದ ಸಾಮೂಹಿಕ ಭಜನೆ ಕಾರ್ಯಕ್ರಮಗಳೂ ನಡೆದವು.

ತಿ. ತಿ. ದೇ. ದಾಸಸಾಹಿತ್ಯ ಪ್ರಾಜೆಕ್ಟ್ ಹಾಗೂ ಸ್ಥಳೀಯ ಕುಮಾರವ್ಯಾಸ ಸೇವಾ ಸಂಘಗಳ ಸಂಯುಕ್ತ ಆಶ್ರಯದಲ್ಲಿ ನಡೆದ ಈ ಉತ್ಸವದಲ್ಲಿ ದಾಸಸಾಹಿತ್ಯ ಪ್ರಾಜೆಕ್ಟಿಗೆ ಅನೇಕ ಹರಿದಾಸರ ಛಾಯಾಚಿತ್ರಗಳು, ಹನುಮೇಶವಿಠಲರಿಂದ ರಚಿತವಾದ ಅಪ್ರಕಟಿತ ಹರಿಕಥಾಮೃತಸಾರ ವ್ಯಾಖ್ಯಾನ, 32 ವಿವಿಧ ದಾಸರುಗಳ 479 ಉಗಾಭೋಗಗಳ ಪ್ರತಿಗಳು ಲಭ್ಯವಾದವು. ◢

Edited and Published on behalf of the T. T. Devasthanams by K. Subba Rao, M.A., and Printed at
T. T. D. Press by M. Vijayakumar Reddy, Manager, T. T. D. Press, Tirupati – 517501.

